# ಮಲಮಗಳು

ಸಾಮಾಜಿಕ ಕಾದಂಬರಿ

ರಾ. ವೆಂ. ಶ್ರೀನಿವಾಸ

ಪ್ರಕಾಶಕರು :
ಮಾಧವ ಸನ್ಸ್
ಬೆಂಗಳೂರು

# ಎರಡು ಮಾತು

ಶ್ರೀ ರಾ. ವೆಂ. ಶ್ರೀನಿವಾಸರು ಕಾದಂಬರಿ ಕ್ಷೇತ್ರದಲ್ಲಿ ಈಗತಾನೆ ಕಾಲಿಡುತ್ತಿದ್ದಾರೆ. "ಮಲಮಗಳು" ಅವರ ಮೊದಲ ಯತ್ನ. ಅವರು ವಿದ್ಯಾರ್ಥಿ ದೆಸೆಯಲ್ಲಿರುವಾಗಲೇ ಬರವಣಿಗೆಯ ಉತ್ಸಾಹವನ್ನು ತಳೆದು ಇಂದು, ಶ್ರೀಮಾನ್ ಜಿ. ಬಿ. ಜೋಶಿಯವರ ಸಹಕಾರದಿಂದ ಈ ಮೊದಲ ಕಾಣಿಕೆಯನ್ನು ಕನ್ನಡಿಗರಿಗೆ ಅರ್ಪಿಸುತ್ತಿದ್ದಾರೆ. ಅನುಭವವು ವಿಶಾಲಿಸಿ, ವ್ಯವಸಾಯದಿಂದ ಸನ್ನಿವೇಶರಚನೆ, ಸ್ವಭಾವನಿರೂಪಣೆಗಳಲ್ಲಿ ಅವರು ಹೆಚ್ಚಿನ ನೈಪುಣ್ಯ ಪಡೆದಾರೆಂಬ ಆಶ್ವಾಸವನ್ನು ಈ ಮೊದಲ ಕೃತಿಯಲ್ಲಿ ಅವರು ಚಿತ್ರಿಸಿದ್ದಾರೆ. ಬಡತನದ ಬಾಳಿಗೂ, ಸ್ತ್ರೀಯ ದಾರುಣಜೀವನಕ್ಕೂ, ಅವರಲ್ಲಿ ಅನುತಾಪ ತುಂಬಿದೆಯೆಂಬುದನ್ನು ಈ ಮೊದಲ ಸಾಹಸವೇ ತೋರಿಸುವುದು. ಶ್ರೀಯುತರು ಈ ಉದ್ಯಮದಲ್ಲಿ ಹೆಚ್ಚಿನ ಶ್ರೇಯಸ್ಸನ್ನು ಪಡೆಯಲೆಂದು ಹಾರೈಸುತ್ತೇನೆ

ಪುತ್ತೂರು, ದ. ಕ.
೨೪–೧೨–೧೯೪೪.

ಇತಿ
**ಶಿವರಾಮ ಕಾರಂತ**

# ಎರಡನೆಯ ಮುದ್ರಣ

ಕೇವಲ ಒಂದೂವರೆ ವರುಷದಲ್ಲಿಯೆ  ಮಲಮಗಳು’ ಎರಡನೆಯ ಮುದ್ರಣ ಕಾಣುತ್ತಿದೆ. ನನ್ನ ಮೊಟ್ಟಮೊದಲನೆಯ ಈ ಕೃತಿಗೆ ಇಷ್ಟು ಪ್ರೋತ್ಸಾಹವನ್ನಿತ್ತು ಹರಸಿದ ಕನ್ನಡಿಗರಿಗೆ ನಾನು ಬಹಳ ಕೃತಜ್ಞನಾಗಿದ್ದೇನೆ. ನನ್ನ ಮೇಲೆ ತುಂಬುವಿಶ್ವಾಸವನ್ನಿಟ್ಟು, ಇಷ್ಟು ಬೇಗ ಇಷ್ಟು ಸುಂದರವಾಗಿ ಪುನರ್ಮುದ್ರಣ ತಂದುದಕ್ಕಾಗಿ ‘ಮಾಧವ ಸನ್ಸ್’ ಅವರಿಗೂ ಮುದ್ರಣಾಲಯದ ಶ್ರೀಮಾನ್ ಜಿ. ಎಚ್. ರಾಮರಾಯರಿಗೂ ನನ್ನ ಹೃತ್ಪೂರ್ವಕ ವಂದನೆಗಳು.

ಮೈಸೂರು ನಗರ,<br>೧-೮-೧೯೪೬.

**ರಾ. ವೆಂ. ಶ್ರೀನಿವಾಸ**

# ಮಲಮಗಳು

## ೧

“ ಹೌದು, ಗಂಡಾಗುಂಡಿ ಇಲ್ಲದಿದ್ದರೆ ಜೀವನ ಎಲ್ಲಿದೆ! ನನ್ನ ಮುಂದೆ ಹುಟ್ಟಿದ ಚೋಟುದ್ದ ಚೇಳು! ಹಲ್ಲು ಮೂಡುವವರೆಗೆ ಹಾಲು ಹಾಕಿದ ಋಣ ತೀರಿಸಲಾರೆ. ತಲೆಯೆಲ್ಲಾ ಹರಟುತ್ತೀಯ .ಕತ್ತೆ .. ಮುಚ್ಚು ಬಾಯಿ ” ಎನುತ್ತ ಕೂಗುತ್ತ ಅಂಗಡಿಯ ಕಟ್ಟೆಯ ಕೆಳಗೆ, ಸೂರು ಅಡಿಯಲ್ಲಿ ಹೊಗೆ ತುಂಬಿದ ಒಲೆಯೊಂದರ ಕಟ್ಟಿಗೆಯನ್ನು ಹುಣ್ಣು ಹರಡಿದ ಬಲಗೈಯಿಂದ ಆಕೆ ನೆಲಕ್ಕೆ ಕುಕ್ಕಿದಳು, ಒಲೆಯ ಮೇಲಿದ್ದ ಮಡಕೆಯನ್ನು ನೆಲದ ಮೇಲೆ ಬಡಿದಳು.

“ ನೀನು ಕತ್ತೆ. ಬಾಯಿ ಮುಚ್ಚು. ನಿನ್ನ ಕಿರಚಾಟ ಕೇಳಿಯೆ ಇಷ್ಟೊಂದು ಜನ ನೆರೆದಿದಾರೆ. ತೋರಿಸು ನಿನ್ನ ಮುಖ ಅವರಿಗೆ.... ಪಿಶಾಚಿ! ಥೂ! ಅತ್ತು ಹೆದರಿಸುತೀಯ. ದೇವರು ಅದಕ್ಕೇ ನಿನಗೆ ಸಾವಿರ ರೋಗ ದಯಪಾಲಿಸಿರುವುದು. ಭೂತ ಇದ್ದ ಹಾಗಿದೀಯ! ನಿನ್ನ ಮುಖ ನೋಡು, ಮೂರು ಕಾಸು ತರುವ ಯೋಗ್ಯತೆಯಿಲ್ಲ. ಹೊರಡು. ನಮಗೇನು ? ಇದುವರೆಗೆ ದುಡಿದವರು ಯಾರು ? ರೋಗ ಎಂದು ಕುಳಿತರೆ ಎಷ್ಟು ದಿನ ತಂದು ತಿನ್ನಿಸುವುದು ನೀನೂ ದುಡಿ . ನಿನಗೇನು ಧಾಡಿ ಸುಖವಾಗಿರು ”

“ ನನ್ನ....”

“ ಮುಚ್ಚು ಬಾಯಿ. ಮಾತಾಡಬೇಡ. ನೀನು ದುಡಿದು ತಂದ ಚೂರು ತೇವೆ-ಬಟ್ಟೆ ಕೂಡ ನಮ್ಮೊಡನೆ ಸೇರಿಲ್ಲ. ನಿಂದೇನಿದೆ? ಏನೋ ಹೋಗಲಿ, ಎಂದು ಆ ಮಡಕೆ, ತಟ್ಟೆ, ಸೌಟು ಕೊಟ್ಟಿದೇವೆ. ನಿನ್ನದು ಇನ್ನೇನೂ ಇಲ್ಲ”

“ ನನ್ನ ”

“ ಇಷ್ಟು ದಿನ ದೊಡ್ಡ ಹೊರೆಯಾಗಿದ್ದೆ. ನಿನ್ನಿಂದ ನಾವು ಎಷ್ಟು ತೊಂದರೆ ಪಡಬೇಕಾಯಿತು. ಶನಿ ಬೆನ್ನು ಹಿಡಿದಿತ್ತು. ಸದ್ಯ, ಇಂದು ತೊಲಗಿದ ಹಾಗಾಯಿತು. ನಿನ್ನ ಬಿಡಿಕಾಸೂ ನಮ್ಮಲ್ಲಿಲ್ಲ.. ನಾನು, ಅಪ್ಪ ಸುಖವಾಗಿರುತೇವೆ ”

" ನನ್ನಿಂದ...."

" ನಿನ್ನಿಂದೇನು ಸುಖವಾಯಿತು ಅಪ್ಪನಿಗೆ. ಹಾದಿಯ ಹಾವಾಡಿಗ ಭಿಕಾರಿ ನಿನ್ನನ್ನ—ಮುದ್ದು ಮಗಳನ್ನ ಒತ್ತಾಯದಿಂದ ಅಪ್ಪನಿಗೆ ಕೊಟ್ಟು ಹೋದನಂತೆ .. ಹೆತ್ತ ತಂದೆಗಿಂತ ಬೀದಿಯಲ್ಲಿ ಹೋಗುವ ಇವಳು–ಈ ಮಾರಿ, ನನ್ನನ್ನ ಕಾಪಾಡಿದಳಂತೆ! ದೇವರು ಇಲ್ಲವೇ ಇಲ್ಲ. ಎಲ್ಲ ಇವಳೇ ನಡಸುತಾಳೆ. ನಾನು ಚೋರ್ಗ ಚೇಳು. ನೀನು? ಹಾವಾಡಿಗನ ಮಗಳು. ಮಹಾ ವಿಷ! ತೊಲಗು. ಇದು ಎರಡನೆಯ ಸಾರಿ. ಖಂಡಿತ, ಅಪ್ಪ ನಿನ್ನನ್ನ ಸೇರಿಸಲಾರ. ನನಗೆ ಮಾತು ಕೊಟ್ಟಿದಾನೆ "

" ನನ್ನ ಆ ಗೆಜ್ಜೆ! ಆ ಪೊಟ್ಟ ತಟ್ಟೆ, ಕುಪ್ಪಸ "

" ಅಬ್ಬ, ಇವಳ ಗೆಜ್ಜೆ! ಇವಳು ಸಂಪಾದಿಸಿದ್ದು! ತಟ್ಟೆ ನಿನದಲ್ಲ. ಕುಪ್ಪಸ ನನ್ನದು ಇನ್ನೇನು. ಭಿಕಾರಿ! ತೊಲಗು. ಸಂಜೆ ನಮ್ಮೂರಿನಲ್ಲಿರಬೇಡ''

ಎಂದು ಹದಿನಾರು ವರುಷದ ಒಳ್ಳೆಯ ಮೈಕಟ್ಟಿನ ಹುಡುಗಿ ಕೈಯೊಳಗಿದ್ದ ಕೋಲೊಂದನ್ನು ಮೇಲಕ್ಕೆ ಬೀಸಿ ಹೇಳಿದಳು. ಜನ ನಿಂತು ಈ ಜಗಳ ನೋಡುತ್ತಿತ್ತು. ಆಗಲೇ ಬಿಸಿಲೇರಿತ್ತು. ಸೂರಿನ ಕೆಳಗೆ ಹೊಗೆ ತುಂಬಿದ ಒಲೆಯ ಮುಂದೆ ಕುಳಿತಿದ್ದ ಹೆಂಗಸು ಜನರ ಕಡೆ ತಿರುಗಿದಳು: " ಅಪ್ಪಾ, ನಾನು ಎತ್ತಿ ಸಾಕಿದ ಆ ಚೋಟುದ್ದ ಚಂಡಿ, ಈ ವಯಸ್ಸಿನಲ್ಲಿ ನನ್ನನ್ನು ಹೊರೆದೂಡುತಿದಾಳೆ. ಕೈ ಹಿಡಿದ ಷಂಡ ಅಲ್ಲಿಯೇ ಕುಳಿತಿದಾನೆ. ಅವನ ಬಾಯಿಂದ ಒಂದು ಮಾತೂ ಇಲ್ಲ. ಈ ಮಾರಿಹುಡುಗಿ ಎರಡು ತಿಂಗಳ ಬತ್ತಿ; ಆಗ ತಾಯಿಯನ್ನ ಕಳೆದುಕೊಂಡಿತು. ನನಗೆ ಹದಿನಾರು ವರುಷ. ಅಂದಿನ ಕತೆ ನೆನಸಿಕೊಂಡರೆ ಎಂಥವನಿಗಾದರೂ ಗಂಟಲು ಬಿಗಿಯುತದೆ

" ದೇವನಹಳ್ಳಿಯ ಆಲದ ಮರದ ಕೆಳಗೆ ಅವೊತ್ತು ನಮ್ಮ ತಂದೆ ನನ್ನೊಡನೆ ಇಳಿದಿದ್ದರು. ಈ ರಕ್ಕಸಿಯ ತಾಯಿ ಅಂದೇ ಅಲ್ಲಿಯೆ ತೀರಿಕೊಂಡಳು. ಮಳೆ ಹಸಿಹಾಕುತಿತ್ತು. ಹೆಣ ಒಂದು ಕಡೆ ಬಿದ್ದಿದೆ. ಎರಡು ತಿಂಗಳ ಕೂಸು ಒರಲುತ ಜೋಲಿಯಲ್ಲಿದೆ. ಈತ ದಿಕ್ಕುತೋಚದೆ ಸುಮ್ಮನೆ ಮುಖ ಮುಚ್ಚಿಕೊಂಡು ಕುಳಿತುಬಿಟ್ಟಿದ್ದ. ಅಂದು ಅಲ್ಲಿದ್ದುದು ನಮ್ಮ ಎರಡೇ ಸಂಸಾರ. ನನ್ನ ತಂದೆ ತುಂಬ ಹೆಂಗರುಳಿನವನು. ಈತನಿಗೆ ಆಗ ಎಷ್ಟು ಸಹಾಯ ಮಾಡಿದ. ನಾವಿಥ ಜನ್ಮ ತಾಳಿದರೂ ಈತ

ಆ ಋಣ ತೀರಿಸಲಾರ. ಹಣ್ಣು ಮುದುಕ ಆದರೂ ಇವನಿಗೆ ಧೈರ್ಯ ಹೇಳಿ ಆ ಹಣದ ಕೆಲಸ ಪೂರೈಸಿದ. ಮಗುವಿನ ಕಷ್ಟ ನೋಡಲಾರದೆ, ತನ್ನ ಜೀವನ ಹಾಳಾದರೂ ಚಿಂತೆಯಿಲ್ಲ, ತನಗೆ ತೊಂದರೆಯಾದರೂ ವ್ಯಥೆಯಿಲ್ಲ, ತನ್ನ ಬಾಳು ಮುಗಿಯಿತು, ಈ ಮಗು ಬದುಕಲಿ, ಈ ಯುವಕ ಇನ್ನೂ ಬಾಳಲಿ, ಎಂಬ ಉದ್ದೇಶದಿಂದ ನನ್ನ ತಂದೆ ನನ್ನನ್ನು ಈತನಿಗೆ ಕೊಟ್ಟುಬಿಟ್ಟ. ಈತ ನನ್ನನ್ನು ಮೋಹಿಸಿದ್ದು ನಿಜ. ಏಕೆಂದರೆ ನಾನು ಈಗಿನಂತೆ ಕುರೂಪಿಯಾಗಿರಲಿಲ್ಲ. ನನ್ನ ತಾಯಿಯಂತೆ ನಾನೂ ಬಣ್ಣದಲ್ಲಿಯೂ, ರೂಪಿನಲ್ಲಿಯೂ ಚೆಲುವೆ. ಹದಿನಾರು ವರುಷ ತುಂಬಿತ್ತು.

" ನನ್ನ ತಂದೆಯ ಹತ್ತಿರ ಒಂದೇ ನಾಗರ ಹಾವಿತ್ತು. ಅವನಿಗೆ ನನ್ನನ್ನು ಪೋಷಿಸುವುದರಿಂದ ಹಾವಿನ ಸರಸ ಬಿಡಬೇಕೆಂದಿದ್ದ. ಆ ಒಂದು ಹಾವಿನ ಆಟದಲ್ಲಿ ನಾನು ಡೋಲು ಬಡಿಯುತ್ತಿದ್ದೆ. ಆಮೇಲೆ ನನ್ನ ತಂದೆ ಡೋಲು ಬಾರಿಸುತ್ತಿದ್ದ, ನಾನು ಕುಣಿಯುತ್ತಿದ್ದೆ. ನೋಡುವುದಕ್ಕೂ ಚೆಲುವಳಾಗಿದ್ದೆ. ಆದುದರಿಂದ ನಮ್ಮಪ್ಪನಿಗೆ ಹೆಚ್ಚು ಶ್ರಮವಿಲ್ಲದೆ ಹಣ ಸಂಪಾದನೆಯಾಗುತ್ತಿತ್ತು. ತಾನೇ ಅಷ್ಟು ದುಡಿಯಲು ಶಕ್ತಿಯಿಲ್ಲ. ಆದರೂ ಈ ಎಳೆಯ ಸಂಸಾರದ ದುರವಸ್ಥೆ ನೋಡಿ ಸಹಿಸಲಾರದೆ, ಈತನಿಗೆ ನನ್ನನ್ನು ಕೊಟ್ಟುಬಿಟ್ಟ. ಅದಕ್ಕೆ ಪ್ರತಿಫಲ ನೋಡಿ ಸ್ವಾಮಿ! ---ಹೊರಡಬೇಕಂತೆ. ಇಲ್ಲದಿದ್ದರೆ ನಾನು ಇವರ ಕಣ್ಣಿಗೆ ಮೆಣಸಿನ ಕಾಯಿ.

" ನಮ್ಮಪ್ಪ ನನ್ನನ್ನಗಲಿದಾಗ ಒಂದು ಗೆಜ್ಜೆಕುಚ್ಚು, ದೊಡ್ಡತಟ್ಟೆ ಉಡುಗೊರೆ ಕೊಟ್ಟ. ಆತನ ನೆನಪಿಗಾದರೂ ಸಾಯುವ ತನಕ ಅದನ್ನಿಟ್ಟುಕೊಳ್ಳೋಣ. ಎಂದರೆ ಅವುಗಳನ್ನೂ ಕೊಡದೆ ನೋಯಿಸುತಿದ್ದಾರೆ ... ಈ ಮಾರಿ ಹುಡುಗಿಯನ್ನು ಬೆನ್ನಿಗೆ ಕಟ್ಟಿಕೊಂಡು, ತಡೆಯಲಾರದಷ್ಟು ಹೊರೆಯನ್ನು ತಲೆಯ ಮೇಲೆ ಹೊತ್ತು ಊರೂರು ಅಲೆಯುತ್ತಿದ್ದೆ. ನನ್ನ ಕುಣಿತದಿಂದಲೇ ನಮ್ಮ ಜೀವನ ನಡೆಯುತ್ತಿತ್ತು. ಆದರೆ ನನ್ನ ಗಂಡ ಪ್ರಚಂಡ. ನೋಡಿ, ಅಲ್ಲಿ—ಮೂಲೆಯಲ್ಲಿ ಕುಡಿದು ಬಿದ್ದಿದ್ದಾನೆ; ಏಳಲಾರ. ಏನು ಅಂದರೂ ಅನ್ನಿಸಿಕೊಳ್ಳುತಾನೆ ನೀಚ, ನಿಷ್ಕರುಣಿ. ಕುಣಿತದ ದುಡ್ಡು ಅವನ ನೀಸೆಗೆ ಸಾಲದೆ ನನ್ನ ಜೀವನ ಹಾಳುಮಾಡಿದ. ಅಬ್ಬ! ನಾನು ಎಷ್ಟೆಷ್ಟು ಕಷ್ಟಪಟ್ಟೆ. ಹೌದು........ನನಗೆ ನಿಜವಾಗಿಯೂ ಈಗ ಸಾವಿರ ರೋಗ. ನನ್ನ ದುಡಿಮೆ ನಿಂತಿದೆ. ಇಬ್ಬರೂ ಸೇರಿ ನನ್ನನ್ನು

ಹೊರದೂಡಿದಾರೆ .......ಆಕೆ ಮಲಮಗಳು, ನಾನು ಮಲತಾಯಿ, ಅದೊಂದು ಸತ್ತ ಗಂಡು !.......ನನ್ನ ಸರ್ವಸ್ವವನ್ನೂ ತಾವೇ ಇಟ್ಟು ಕೊಂಡಿದಾರೆ. ಆಗ ಸಾಕಿದ ನಾಯಿ ಈಗ ನನ್ನನ್ನು ಕಚ್ಚಿ ಓಡಿಸಿದೆ. ಇಬ್ಬರಿಗೂ ನನ್ನಿಂದ ತೊಂದರೆ ಹೆಚ್ಚಾಯಿತು. ರಸ ಇರುವವರೆಗೆ ಕಬ್ಬು ಬೇಕು. ಆಮೇಲೆ ಅದೇಕೆ? ಅದಕ್ಕೇ ನನ್ನನ್ನು ದೂಡಿದಾರೆ. ಅವನಿಗೆ ಪ್ರಾಯ ಬಂದಿದೆ. ಕುಡುಕನ ಮನಸ್ಸು ಅವಳ ದುಡಿಮೆಯ ಕಡೆಗೆ ಸೀಸೆ ಒಡ್ಡಿ ನಿಂತಿದೆ. ಆದುದರಿಂದ ಈಗ ನಾನು ಜೀವ ಹೋಗಲಿ. ನನ್ನ ಗೆಜ್ಜೆ, ತಟ್ಟೆ, ಕುಪ್ಪಸವನ್ನಾದರೂ ಕೊಡಲಿ—ಛೆ! ನಾನೆಲ್ಲಿ ಬಿಟ್ಟೇನು? ಕೊಡಲೇ ಬೇಕು. ನಾನು ತೆಗೆದುಕೊಳ್ಳುತ್ತೇನೆ ಇಲ್ಲಿ ಇಟ್ಟು, ಮಾತಾಡೇ, ಚಂಡಿ. ಸುಮ್ಮನೇಕೆ ನಿಂತಿದೀಯ? ......'' ಎಂದು ಆಕೆ ಸುಮ್ಮನೆ ಕಣ್ಣೀರಿಡುತ್ತ ಎಲ್ಲ ತೋಡಿಕೊಂಡಳು.

ಹದಿನೈದು ಇಪ್ಪತ್ತು ಜನ ಸುತ್ತ ನಿಂತು ಕೇಳುತ್ತಿದ್ದರು ಕೆಲವರು ಮುಂದೆ ಸಾಗುತ್ತಿದ್ದರು. ಕೆಲವರು ಹೊಸಬರು ಬಂದು ಸೇರುತ್ತಿದ್ದರು. ಒಬ್ಬೊಬ್ಬರು ಕುತೂಹಲದಿಂದ ಎಲ್ಲವನ್ನೂ ಆಲಿಸುತ್ತಿದ್ದರು. ಅವರೊಳಗೊಬ್ಬ ನಿಟ್ಟುಸಿರು ಬಿಟ್ಟು ಮುಂದೆ ಸರಿದ ವಯಸ್ಸು ಮೂವತ್ತೈದು ಇರಬಹುದು. ನೆಲವನ್ನೇ ನೋಡುತ್ತ ನಿಧಾನವಾಗಿ ನಡೆಯುತ್ತಿದ್ದ. ಆಗಾಗ ಏನೇನೋ ಗೊಣಗುತ್ತಿದ್ದ, ಅಲ್ಲಲ್ಲೇ ನಿಂತು ಪುನಃ ಆ ಜಗಳ ನೋಡುತ್ತಿದ್ದ. ಬಲು ದೂರ ನಡೆದು ಊರ ಆಚೆ ಬಂದು ಬಿಟ್ಟ. ಹತ್ತಿರದಲ್ಲಿದ್ದ ಹಾಳು ಮನೆಯ ಅರಳಿಕಟ್ಟೆಯ ಹತ್ತಿರ ಕೆಲಚಣ ಸುಮ್ಮನೆ ಕದಲದೆ ನಿಂತಿದ್ದ, ಹಾಗೆಯೇ ಗಪ್ಪಕ್ಕ ಅಂಗೈಕೊಟ್ಟು ಕುಳಿತುಬಿಟ್ಟ. ತಲೆಯೊಳಗಿದ್ದ ಯೋಚನೆ ಹರಡಿ ಹರಡಿ ಜೇಡರ ಬಲೆಯಾಯಿತು; ವಿಶ್ವರೂಪ ತಾಳಿತು:

"ಅಬ್ಬ! ಮಲಮಗಳು—ಇಷ್ಟುದ್ದ ಹುಡುಗಿ ಹೆತ್ತ ತಾಯಿಗಿಂತ ಹೆಚ್ಚಾದ ಆ ರೋಗಿಯನ್ನು, ಸಾಕಿದವಳನ್ನು ಹೊಡೆದೋಡಿಸಿಬಿಟ್ಟಳು. ಲೋಕದಲ್ಲಿ ಮಲಮಗಳೇ ಕಷ್ಟಪಡುವವಳೆಂದುಕೊಂಡಿದ್ದೆ. ಮಲತಾಯಿಯೂ ಮಲಮಗಳ ತುಳಿತಕ್ಕೆ ಸಿಕ್ಕುವುದುಂಟು. ನನ್ನ ಹೆಂಡತಿಗೆ ಇಲ್ಲಿ ಸುಖವಿಲ್ಲ; ಸದಾ ಉರುಲು. ತವರೂರಿನಲ್ಲಿ ಮಲತಾಯಿಯ ತಿಕ್ಕಾಟ. ಆ ತಂದೆಯೊ, ಅರ್ಧಾಂಗಿಯ ಮಾತಿಗೆ ಸ್ವಲ್ಪವೂ ಎದುರಾಡಲಾರ. ಅವಳ ಬಾಯಲ್ಲಿ ಬಂದುದು ನಡೆದು ಹೋಗಬೇಕು. ಅದೇನೇ

ಇರಲಿ. ಇದರಿಂದ ನನ್ನ ಹೆಂಡತಿ ಎಷ್ಟು ಕಷ್ಟಕ್ಕೀಡಾಗಿದಾಳೆ. ಅವರಿಗೆ ನಾವು ಬುದ್ಧಿ ಹೇಳುವಹಾಗಿಲ್ಲ, ನಿಜ. ಆದರೆ ನನ್ನ ತಂದೆತಾಯಿ ಗಳಿಗೆ? ಅವರಾದರೂ ಆಕೆಯನ್ನೇಕೆ ಮಮತೆಯಿಂದ ಕಾಣಬಾರದು? ಕರುಣೆಯಿಂದ ನೋಡಬಾರದು? ನಾಲ್ಕು ಮಕ್ಕಳ ತಾಯಿ; ಮನೆಗೆ ಹಳಬಳಲ್ಲವೆ! ಅವಳಿಗೇಕೆ ಸ್ವಾತಂತ್ರ್ಯವಿಲ್ಲ? ನಮ್ಮ ತಂದೆ ದೊಡ್ಡ ಗಂಡಸು. ವೇದ ಶಾಸ್ತ್ರ ಓದಿದವನು. ನನ್ನ ಹೆಂಡತಿಯನ್ನು ಹೊಡೆಯ ಬಹುದೆ? ಜಣಚಣಕ್ಕೂ ತಪ್ಪು ಕಂಡುಹಿಡಿದು ಗುದ್ದುತ್ತಾರೆ, ಅತ್ತೆ ಮಾವ. ಅವರಿಗೇನು ಘಾಡಿ! ಆಕೆ ತಮ್ಮ ಸೊಸೆಯಲ್ಲವೆ? .. ತಮ್ಮ ಮಗನ ಹೆಂಡತಿಯಲ್ಲವೆ? ಮನೆ ಬೆಳಗುವ ಮೊಮ್ಮಗನನ್ನು ಹೆತ್ತ ಎಳೆಮಕ್ಕಳ ತಾಯಿಯಲ್ಲವೆ? ಮನೆಯ ಚಿಕ್ಕ ಮುತ್ತೈದೆಯಲ್ಲವೆ? .... ಈ ಜಗಳ, ಹೊಡೆದಾಟ ನೋಡಿಕೊಂಡು ನಾನೇಕೆ ಸುಮ್ಮನಿರ ಬೇಕು? ನಾನೇ ಬೇರೆ ಸಂಸಾರ ಹೂಡಬಾರದೇನು? ಊರಿನವರೇನನ್ನು ತ್ತಾರೆ, ಮಗಾ! ಊರನ್ನು ಮೆಚ್ಚಿಸಲಿಕ್ಕಾದೀತೆ? ಈಗ ನನಗನ್ನು ತ್ತಿಲ್ಲವೆ? -ಹೆಂಡತಿಯನ್ನು ತಂದೆತಾಯಿಗಳ ಮುಷ್ಟಿಗೆ ಕೊಟ್ಟು ಅವಳ ಒದ್ದಾಟ ನೋಡುತಿದೆ ಈ ಬುದ್ಧಿಯಿಲ್ಲದ ಮುದ್ದು! ಎಂದು. ಈಗ ನಾನು ಯಾರಿಗೆ ಬುದ್ಧಿ ಹೇಳಲಿ. ಯಾರಿಂದ ಬುದ್ಧಿ ಕಲಿಯಲಿ. ಮದುವೆ ಯಾಯಿತು. ನಾಲ್ಕು ಮಕ್ಕಳಾಯಿತು. ಆದರೂ ಒಂದು ನಿಮಿಷವೂ ನಾನು ಸುಖವಾಗಿಲ್ಲ--ಅವರ ಹೊಟ್ಟೆಯಲ್ಲಿ ಹುಟ್ಟಿ, ಅವರ ಅನ್ನ ಉಂಡು ಬೆಳೆದು, ಈಗ ಮೊನ್ನೆ ತಾನೇ ಬಂದ ಈ ಹೆರರ ಮನೆಯ ಹೆಣ್ಣಿನ ಸಲುವಾಗಿ ಮುಪ್ಪಿನ ತಂದೆತಾಯಿಗಳನ್ನು ಅಗಲುವುದೆ? ಅದು ಸರಿ ಯಲ್ಲ. ನನ್ನ ಹೆಂಡತಿಯೇಕೆ ಮುದಿವಯಸ್ಸಿನ ಅತ್ತೆ ಮಾವಂದಿರ ಮನಸ್ಸು ನೋಯುವ ಕೆಲಸ ಮಾಡಬೇಕು? ಅವಳು ಹಾಗೆ ಮಾಡದೆ, ಅವರು ಹೇಳಿದಂತೆ ಕೇಳಿದರೆ ತೊಂದರೆಯೇ ಇಲ್ಲವಲ್ಲ! ಆದರೆ, ಅವ ಳೇನೂ ಅಂಥ ಮನನೋಯುವ ಕೆಲಸ ಮಾಡಿದ್ದು ಒಂದೂ ನನಗೆ ನೆನ ಪಿಲ್ಲ. ಆದರೂ ದಿನಬೆಳಗಾದರೆ ಜಗಳ. ನಮ್ಮ ತಂದೆಯ ಗುಣವೇ ಅಂಥದು. ನಿಜ. . . ಆದರೆ? ನನಗೊಂದೂ ತಿಳಿಯದು. ಏಕೊ ದಿನ ದಿನ ಕಳೆಯುತ ತಲೆ ತುಂಬ ಕೆಡುತಿದೆ. ಈ ಗೊಂದಲದಲ್ಲಿ ಕೆಲಸ ಕಳೆದು ಕೊಂಡೆ. ಹೊಟ್ಟೆಯ ಪಾಡಿಗೆ ಅಪ್ಪನ ಹಂಗು ಈಗ ಬೇಕಾಗಿದೆ. ಆದರೆ, ಊರು ಬಿಟ್ಟು ಓಡಿಹೋಗೋಣ ಎನ್ನಿಸುತದೆ - ಒಂದೊಂದು ಸಲ ಪ್ರಾಣ

ಕಳೆದುಕೊಂಡುಬಿಡೋಣ ಎನ್ನಿಸಿಬಿಡುತದೆ ''

ಆತನ ಮನಸ್ಸು ಈ ಯೋಚನೆಯೊಳಗೆ ಮುಳುಗಿತ್ತು. ಏನೇನೊ ಹರಟಿತು. ಹತ್ತಿರದಲ್ಲಿನ್ನಾರೂ ಇರಲಿಲ್ಲ. ದೂರದಲ್ಲಿ ತಿಪ್ಪಾಜೋಯಿಸರು ಹೆಗಲಮೇಲೊಂದು ಗಂಟು ಹೇರಿಕೊಂಡು, ಬಾಳೆಗೊನೆ ಹಿಡಿದು ಊರ ಕಡೆ ಬರುತ್ತಿದ್ದರು. ಈತನ ಹತ್ತಿರ ಬಂದರು.

" ಇದೇನು ಕೃಷ್ಣಮೂರ್ತಿ ಒಬ್ಬನೇ ಇಲ್ಲಿ ಕುಳಿತುಬಿಟ್ಟೆ? ಗಂಟೆ ಎಷ್ಟು; ಒಂದು ಗಂಟೆ ಆಗಿರಬಹುದು.''

" ಏನೋ ಸುಮ್ಮನೆ . ಬೇಜಾರಾಯಿತು. ಹಾಗೆಯೇ ಈ ಕಡೆ ಬಂದೆ. ಆಯಾಸವಾಯಿತು. ನೆರಳಿನಲ್ಲಿ ಕುಳಿತಿದ್ದೆ. ಊರಕಡೆ, ತಾನೆ, ತಾವು? ನಡೆಯಿರಿ ಹೊರಡೋಣ ಯಾವ ಕಡೆಗೆ ಹೋಗಿದ್ದಿರಿ?''

" ಇಲ್ಲಿ, ಇಲ್ಲೇ ತೋಟಕ್ಕೆ ಹೋಗಿದ್ದೆ. ನಿನ್ನೆ ಸ್ವಲ್ಪ ಗಾಳಿ ಮಳೆ ಬಂತು ನೋಡು; ಅದರಿಂದ ತೋಟದಲ್ಲಿ ಏನಾಗಿದೆಯೋ ನೋಡಿಕೊಂಡು ಬರೋಣ, ಎಂತ ಬೆಳಗ್ಗೆ ಹೊರಟಿದ್ದೆ. ಒಂದು ಬಾಳೆಗಿಡ ಬಿದ್ದಿತ್ತು. ಹತ್ತು ಹನ್ನೆರಡು ಮಾವಿನಕಾಯಿ ಬಿದ್ದಿದ್ದುವು. ಗೊನೆಗಿಡ; ಒಳ್ಳೆ ರಸ ಬಾಳೆ. ಗೊನೆ ಕತ್ತರಿಸಿಕೊಂಡು ಬಂದೆ ಏನು, ಕೆಲಸಕ್ಕೆ ರಾಜೀನಾಮೆ ಕೊಟ್ಟುಬಿಟ್ಟೆಯಂತೆ?''

" ಹೌದು ''

ಯಾರಾದರೂ ನಾಲ್ಕು ಜನ ಬುದ್ಧಿವಂತರನ್ನು ಕೇಳಿ ಮಾಡ ಬಾರದೆ ಕೆಲಸ, ಕಿಟ್ಟು? ದುಡುಕಬಾರದಪ್ಪ ಏನೊ ಸದಾ ಯೋಚನೆಯಲ್ಲಿಯೆ ಇರುತೀಯೆ. ಯಾರ ಹತ್ತಿರವೂ ಮಾತಾಡುವುದಿಲ್ಲ. ಏನೊ, ನಿನ್ನ ಕಷ್ಟ ತಿಳಿಯುವುದಿಲ್ಲಪ್ಪ. ಸೂರಪ್ಪ ಮೊದಲಿಂದಲೂ ಸಿಡುಕ. ಅವನ ಗುಣ ನಿನಗೆ ಗೊತ್ತಿಲ್ಲವೆ? ಏನು ಮಾಡುವುದಕ್ಕಾಗುತದೆ. ಅಪ್ಪ ಹೇಳಿದಂತೆ ಮಗ ಕೇಳಲೇ ಬೇಕಪ್ಪ. ಎಷ್ಟಾದರೂ ಜೀವದಿಂದ ಇರುವ ತನಕ ಅವನೇ ಮನೆಗೆ ಯಜಮಾನ. ನಿಮ್ಮ ತಾಯಿ ಮನೆಯ ಯಜ ಮಾನಿ. ನೀನು, ನಿನ್ನ ಹೆಂಡತಿ, ಮಕ್ಕಳು ಎಲ್ಲ ಮನೆಯ ಮಕ್ಕಳು. ಹಿರಿಯರು ಹೇಳಿದಂತೆ ಕೇಳಿಕೊಂಡು ಅವರ ಮನ ನೋಯದಂತೆ ನಡೆದು ಕೊಳ್ಳಬೇಕು. ನೀನು ಸಿಕ್ಕಾಗಲೆಲ್ಲ ಏನಾದರೂ ವ್ಯಾಜ್ಯದ ವಿಷಯ ಹೇಳೇ ಹೇಳುತೀಯೆ. ಅದೇನು, ಪ್ರತಿದಿನ ನಿಮ್ಮ ಮನೆಯಲ್ಲಿ ಕಾದಾ

ಟವೋ ಅಥವಾ ನಾನು ನಿನಗೆ ಸಿಕ್ಕುವ ದಿನವೆಲ್ಲ ನಿಮ್ಮ ಮನೆಯಲ್ಲಿ ಮಾರಾಮಾರಿಯೊ ತಿಳಿಯದು. ನಾನು ಬಹಳ ದೂರ ಇದ್ದುಬಿಟ್ಟಿದೇನೆ. ಹತ್ತಿರ ಇದ್ದಿದ್ದರೆ ಸೂರಪ್ಪನಿಗೆ ಸ್ವಲ್ಪ ಬುದ್ಧಿ ಹೇಳುತಿದ್ದೆ. ಆದರೇನಪ್ಪ, ಅವನು ಯಾರ ಮಾತನ್ನೂ ಕೇಳುವುದಿಲ್ಲ. ತುಂಬ ಸಿಡುಕ. ಈಗ ಎರಡು ವರುಷದ ಹಿಂದೆ ಆಚೆಬೀದಿಯ ಖಾಸಿಂ ಸಾಬಿ ಏನೊ ಅಂದ, ಎಂದು ಅವನ ಮೇಲೆ ತಿರುಗಿಬಿದ್ದ. ಅವನಿಗೂ ನಿಮ್ಮಪ್ಪನಿಗೂ ಯುದ್ಧ ನಡೆದುಹೋಯಿತು. ನೀನು ಆಗ ಸಿರಿಯೂರಿನಲ್ಲಿದ್ದೆ. ಸ್ನಾನ ಮಾಡಿ ಹೊಳೆಯಿಂದ ಮಡಿನೀರು ಹೊತ್ತು ಬರುತ್ತಿದ್ದ ನಿಮ್ಮಪ್ಪನನ್ನು ಖಾಸಿಂ ಸಾಬಿ ಮುಟ್ಟಿ, ಜುಟ್ಟು ಹಿಡಿದು ನಾಲ್ಕೈದು ಹೊಡೆತ ಹೊಡೆದುಬಿಟ್ಟ. ನಿಮ್ಮ ತಂದೆಯೂ ತಿರುಗಿಸಿ ಒಂದೆರಡು ಪೆಟ್ಟು ಕೊಟ್ಟ. ಊರ ಜನರೆಲ್ಲ ನೆರೆದುಬಿಟ್ಟಿದ್ದರು. ನಿಮ್ಮ ತಂದೆಯ ಜನಿವಾರ ಕಿತ್ತುಹೋಗಿತ್ತು. ಜುಟ್ಟು ಅರ್ಧ ಹರಿದು ರಕ್ತ ಸುರಿಯುತಿತ್ತು. ಸಾಬನಿಗೂ ಒಂದೆರೆಡು ಕಡೆ ರಕ್ತ ಬಂದಿತ್ತು. ಆದರೆ ನಿಜವಾಗಿಯೂ ಅಂದು ನಿಮ್ಮಪ್ಪನದೇ ತಪ್ಪು. ಅತಿ ಜಂಬದಿಂದ ಕಾರಣವಿಲ್ಲದೆ ನಡುಬೀದಿಯಲ್ಲಿ ಸಾಬರ ಜಾತಿಗೇ ಬಯ್ಯುವುದಕ್ಕೆ ಮೊದಲುಮಾಡಿದ. ಕಾರಣ ಯಾರಿಗೂ ತಿಳಿಯದು. ಖಾಸಿಂ ಸಾಬಿಗೆ ತಡೆಯಲಾಗಲಿಲ್ಲ. ‘ ಸುಮ್ಮನೆ ಹೋಗು ತೀರೋ ಇಲ್ರಿ ?’ ಎಂದು ಆತ ಕೇಳಿದ. ಅಷ್ಟಕ್ಕೇ ನಿಮ್ಮಪ್ಪ ಏನೇನೋ ಅವಾಂತರ ಮಾಡಿಬಿಟ್ಟ ; ಸಾಬಿಯ ಹತ್ತಿರ ಹೊಡೆತ ತಿಂದ. ಅವೊತ್ತು ಶಿವರಾತ್ರಿ.

“ ಮೊನ್ನೆ, ಈಗ ಆರು ತಿಂಗಳ ಹಿಂದೆ ದೊಡ್ಡಮನೆ ಭೀಮರಾಯರ ಸಂಗಡ ವ್ಯಾಜ್ಯ ಕಟ್ಟಿಕೊಂಡ. ಇವನು ದೇವಸ್ಥಾನಕ್ಕೆ ಹೂ ಕೊಟ್ಟು, ಅವರ ಮನೆಯ ಓಣಿಯ ಮೂಲಕ ಮನೆಯ ಕಡೆಗೆ ಹಿಂತಿರುಗಿದ. ಓಣಿಯಲ್ಲಿ ಭೀಮರಾಯರ ಮನೆಯ ಹುಡುಗರು ಎಂಜಲೆಲೆ ಹಾಕಿಬಿಟ್ಟಿದ್ದರು. ಅದನ್ನು ನೋಡಿದ ಕೂಡಲೆ ಉರಿಉರಿಗೊಂಡು, ಭೀಮರಾಯರ ಮನೆಗೇ ನುಗ್ಗಿ ಜಗಳ ಆಡಿದ. ‘ ದೇವರ ಕೆಲಸ ಮಾಡಲು ಶಕ್ತಿಯಿಲ್ಲದಿದ್ದರೂ ಮಾಡುವವರಿಗೆ ಅಡ್ಡಿಪಡಿಸುತೀರ ? ಬೇಕೆಂತ ಹೀಗೆ ಮಾಡುವುದು ’ ಎಂದು ಏನೇನೊ ಅಂದುಬಿಟ್ಟ. ಭೀಮರಾಯರು ಸಮಾಧಾನಸ್ಥರು. ಆದರೂ ಸಿಟ್ಟುಬಂತು ; ತಡೆದುಕೊಂಡರು. ಅವರ ತಮ್ಮ ವಾಸು ರೇಗಿ, ಮನೆಯಿಂದ ಸೂರಪ್ಪನನ್ನು ತಳ್ಳಿಬಿಟ್ಟ.

“ಯಾವಾಗಲೂ ಜಗಳವೆ. ಅವನ ಜೀವಮಾನವೆಲ್ಲ ಹಾಗೆಯೆ. ಹದಿನೈದು ವರುಷದ ಹುಡುಗನಿಂದ ನೋಡುತಿದೇನೆ. ‘ಸೂರಪ್ಪನ ಜಗಳ’ ಎಂಬ ಒಂದು ದೊಡ್ಡ ಪುಸ್ತಕ ಬರೆಯಬಹುದು. ಈ ಊರಿನಲ್ಲಿ ನೋಡು, ಯಾರಿಗೂ ಅವನನ್ನು ಕಂಡರೆ ಆಗುವುದಿಲ್ಲ. ಸತ್ಯನಾರಾಯಣಶೆಟ್ಟಿ ಒಬ್ಬ ಅವನಿಗೆ ಬೇಕಾದವನು. ಏಕೆಂದರೆ ಅವನ ಗುಣ ಇವನ ಗುಣ ಎರಡೂ ಒಂದೆ. ಅವನು ಅನ್ನ ನೀರು ಹಾಕದೆ, ಒಂಬತ್ತು ತಿಂಗಳ ಗರ್ಭಿಣಿ ಸೊಸೆಯನ್ನು ಸಾಯಿಸಿದ, ಆಕೆಯ ಮೇಲೆ ಸಲ್ಲದ ಅಪವಾದ ಹೊರಿಸಿದ. ಅವನು ನಿಮ್ಮಪ್ಪನ ಸ್ನೇಹಿತ. ಈ ಊರಿನಲ್ಲೆಲ್ಲ ಅವನೊಬ್ಬನೇ ನಿಮ್ಮಪ್ಪ ಮಾಡಿದುದೆಲ್ಲ ಸರಿ ಎಂದು ಹೇಳುವವನು. ಆದುದರಿಂದಲೇ ಯಾರೂ ನಿಮ್ಮ ಮನೆಯ ಕಡೆಗೆ ಹೋಗುವುದಿಲ್ಲ. ಸೂರಪ್ಪನ ನಡತೆ ಬಗ್ಗೆ ಕೇಳು. ಅವನಿಗೆ ತಕ್ಕ ಹೆಂಡತಿ ಹೀಗೆಲ್ಲ ಹೇಳುತಾನೆ, ಎಂದು ಮನಸ್ಸಿಗೆ ಏನೂ ತಂದುಕೊಳ್ಳ ಬೇಡ. ಇರುವ ವಿಷಯ ಹೇಳುತಿದ್ದೇನೆ. ಏಕೆಂದರೆ ನಾನು ಊರಿನ ಮುದುಕ, ನನಗೆ ಅಧಿಕಾರವಿದೆ ..... ಆದರೆ ಏನು ಮಾಡುವುದು. ತಂದೆತಾಯಿ ಇರುವತನಕ ಎದುರಾಡದೆ, ಚಪ್ಪಾಳಿಗೆ ಎರಡು ಕೈಗಳೂ ಸೇರದಂತೆ ನೋಡಿಕೊಳ್ಳುವುದು ನಿನ್ನ ಕೆಲಸ. ಅವರು ಎಷ್ಟು ದಿನ ಇದ್ದಾರು ? ... ಬರಿಯ ಪುರಾಣ ಹೇಳುವುದಕ್ಕೆ ಮೊದಲು ಮಾಡಿದೆ. ಇವೊತ್ತೇನು ನಡೆಯಿತು ? ಊರಹೊರಗೆ ಹೊರಟು ಬಿಟ್ಟೆಯಲ್ಲ ?”

“ಪ್ರತಿದಿನವೂ ಇದ್ದೇ ಇರುತದೆ. ಒಂದೊಂದು ದಿವಸ ಒಂದೊಂದು ಕಾರಣ. ನಿನ್ನೆ ಬೆಳಗ್ಗೆ ದೇವರ ಪಾತ್ರೆಗಳ ಜೊತೆಯಲ್ಲಿ ಹಲಗಾರತಿ ಇಡುವುದನ್ನು ಮರೆತಿದ್ದಳು. ಅದಕ್ಕಾಗಿ ರೇಗಿ ಮಡಿಯಲ್ಲಿದ್ದ ತಾನು, ಸೊಸೆಯನ್ನು ವಿಪರೀತ ಹೊಡೆದುಬಿಟ್ಟ. ಮೊಮ್ಮಗಳು ಉದ್ಧರಣೆಯನ್ನು ಬೇಗ ತೊಳೆದಿರಲಿಲ್ಲ ಎಂದು ಅವಳಿಗೂ ಹೊಡೆತಗಳು ಬಿದ್ದುವು. ನಿನ್ನೆ ರಾತ್ರಿ, ಶ್ರೀನಿವಾಸರಾಯರ ಮನೆಗೆ ಬಂದಿರುವ ಮದ್ದೂರಿನ ಕೇಶವರಾಯರು ಈ ವಿಷಯದಲ್ಲಿ ನನಗೆ ಬಹಳ ಬುದ್ಧಿ ಹೇಳಿದರು. ಕಾರಣವಿಲ್ಲದೆ ಸೊಸೆಯನ್ನೂ ಮೊಮ್ಮಕ್ಕಳನ್ನೂ ಹಾಗೆ ದಂಡಿಸುತಿರುವಾಗ ನೀನು ಸುಮ್ಮನೆ ನೋಡುತ ಕುಳಿತಿರುವುದೆ ? ನಿಮ್ಮ ತಂದೆಗೆ ಬುದ್ಧಿ ಹೇಳಲು ನಿನಗೆ ವಯಸ್ಸು ಸಾಲದೇನು ? ತಪ್ಪಿದ್ದರೆ ಒಪ್ಪಿಕೊಳ್ಳೋಣ. ಅದಕ್ಕೆ ದಂಡನೆ ಅತ್ಯಾವಶ್ಯಕ. ಆದರೆ ಅವರ ಪ್ರತಿಯೊಂದು ಕೆಲಸಕ್ಕೂ ತಪ್ಪಿನ,

ವೇಷ ಹಾಕಿ ನಿರಪರಾಧಿಗಳನ್ನು ನಿಷ್ಕಾರಣವಾಗಿ ದಂಡಿಸುವುದು ಶುದ್ಧ ಮುಟ್ಠಾಳತನ, ಎಂದು ಹೇಳಿದರು. ತಪ್ಪುಮಾಡದ ಅವರು ಹೊಡೆತಕ್ಕೆ ಸಿಕ್ಕಾಗ ಸುಮ್ಮನಿರುವ ನಾನು ದೊಡ್ಡ ತಪ್ಪು ಮಾಡಿದಂತೆ, ಎಂಬುದು ಅವರ ಅಭಿಪ್ರಾಯ ; ನಿಜ. ಆದರೆ ನನಗೇಕೊ ಮೊದಲಿಂದಲೂ ನಮ್ಮ ತಂದೆಯ ಮನ ನೋಯುವಂತೆ ಒಂದು ಅಕ್ಷರವನ್ನೂ ಆಡಿ ಅಭ್ಯಾಸವಿಲ್ಲ. ಒಂದೇ ಒಂದು ಬಾರಿ ಹಾಗೆ ಮಾಡುವ ಪ್ರಯತ್ನ ನಡಸಿದೆ. ಅಂದು ಒಂದು ಪ್ರಳಯವೇ ನಡೆದುಹೋಯಿತು. ನನ್ನ ಹೆಂಡತಿ ಮೂರು ಸೇರು ಹಾಲನ್ನು ಒಲೆಯ ಮೇಲಿಟ್ಟು ಯಾವುದೋ ಬೇರೆ ಕೆಲಸ ಮಾಡುತಿದ್ದಳು. ಉರಿ ಜಾಸ್ತಿಯಾದುದರಿಂದ ಹಾಲು ಬೇಗ ಕಾದು ಉಕ್ಕಿ, ಸ್ವಲ್ಪ ಚೆಲ್ಲಿಹೋಯಿತು. ಆಕೆಯೆ ಬೇಗ ಓಡಿಬಂದು ಇಳಿಸಿದಳು. ಒಂದು ಚಮಚ ಹಾಲೂ ಹಾಳಾಗಿರಲಿಲ್ಲ ; ಎಲ್ಲೊ ತೊಟ್ಟು. ಆದರೆ ನಮ್ಮ ತಂದೆಗೆ ತಡೆಯಲಾರದಷ್ಟು ಕೋಪ ಬಂದುಬಿಟ್ಟಿತು. ದೇವರ ಮುಂದೆ ಗಂಧ ತೆಗೆಯುತಾ ಕುಳಿತಿದ್ದವರು ಹಾಲನ್ನಿಳಿಸುವುದಕ್ಕೆ ಬಂದ ನನ್ನ ಹೆಂಡತಿಯ ಹಣೆಗೆ ಅಷ್ಟು ದೊಡ್ಡ ಗಂಧದ ಕೊರಡನ್ನು ಬೀಸಿ ಒಗೆದರು ಹಣೆ ಒಡೆದುಹೋಯಿತು. ಹಾಗೆಯೆ ಆಕೆ ಹಾಲನ್ನಿಳಿಸಿಟ್ಟು ತಲೆಯಮೇಲೆ ಎರಡು ಕೈಗಳನ್ನೂ ಒತ್ತಿಕೊಂಡು ಓಡಿಬಂದು ಜ್ಞಾನವಿಲ್ಲದೆ ಪಡಸಾಲೆಯಲ್ಲಿ ಬಿದ್ದುಬಿಟ್ಟಳು. ರಾಮಣ್ಣನ ಮಗನಿಗೆ ಪಾಠ ಹೇಳುತ ಕುಳಿತಿದ್ದ ನನಗೆ ಬಲು ಸಿಟ್ಟು ಬಂತು. ಅವಳ ಸ್ಥಿತಿಯನ್ನು ಕಂಡ ಕೂಡಲೆ ನನ್ನ ಹೃದಯವು ಕಿವುಚಿದಂತಾಯಿತು. 'ಅಯ್ಯೋ' ಎಂದು ನಾನು ಆಕೆಯ ಹತ್ತಿರ ಹೋಗಿ ಹಣೆಯನ್ನು ನೋಡಿದೆ ; ನನ್ನ ಪಂಚೆಯ ಒಂದು ಕೊನೆಯನ್ನು ಹಣೆಗೆ ಒತ್ತಿ ಹಿಡಿದೆ. ಇದನ್ನು ನೋಡಿ ನಮ್ಮಪ್ಪನಿಗೆ ತುಂಬ ಸಿಟ್ಟು ಬಂದುಬಿಟ್ಟಿತು. 'ಹಾಲು ಚೆಲ್ಲಿದ ಹಾವಳಿ ನೋಡದೆ ಮುದ್ದಿಸಲಿಕ್ಕೆ ಹೊರಟೆಯಾ ; ಇಲ್ಲಿ ನೋಡು ! ಹಾಲು ಉಕ್ಕಿ ಚೆಲ್ಲಿತು. ಒಲೆಯ ಮೇಲೆ ಹಾಲಿಟ್ಟು ಮಕ್ಕಳಿಗೆ ಮೈ ತೊಳಸುವುದಕ್ಕೆ ಹೊರಡುವುದೆ ? ಇನ್ನು ಸ್ವಲ್ಪ ಇದ್ದರೆ ಎಲ್ಲ ಸುರಿದು ಹೋಗುತಿತ್ತು ನೀನು ಅವಳಿಗೇನು ಶುಶ್ರೂಷೆ ನಡಸುವುದು ; ಪಾಪಿ! ಇಲ್ಲಿ ಬಂದು ನೋಡು. ಎಂಥ ಒಳ್ಳೆಯ ಗಂಧವ ಕೊರಡು ಹೋಳಾಗಿ ಬಿಟ್ಟಿತು. ಇನ್ನು ಎಲ್ಲಿಂದ ತರುವುದು. ಅಂಥ ಒಳ್ಳೆಯ ಗಂಧ ಸಿಕ್ಕುತದೆಯೇನು ? ಎಂದು ಏನೇನೊ ಅರಚಿದರು. ನನಗೆ ಬಹಳ ಸಿಟ್ಟು

ಬಂತು ; ದುಃಖವೂ ಹೆಚ್ಚಾಯಿತು. 'ನಿನ್ನ ಗಂಧದ ಕೊರಡನ್ನೇನು ನೋಡುತಿ, ಇಲ್ಲಿ ನೋಡು. ಹಣೆ ಒಡೆದಿದೆ. ಸ್ವಲ್ಪ ವ್ಯತ್ಯಾಸವಾಗಿದ್ದರೆ ಕಣ್ಣು ಹೋಗುತಿತ್ತು ಅಥವಾ ಜೀವ ಹೋಗುತಿತ್ತು' ಎಂದೆ. 'ಹೋದರೆ ಹೋಗಲಿ. ಈ ರಾಮಾರಂಪ ನಿಲ್ಲುತದೆ ....ನಿನ್ನ ಮಾತು ಕೇಳಿದರೆ ನನ್ನ ಮೈಯೆಲ್ಲ ಉರಿಯುತದೆ. ಮನೆಯಲ್ಲಿರುವ ಸಾಮಾನೆಲ್ಲ ತಿಪ್ಪೆಗುಂಡಿಗೆ ಹೋದರೆ ನಿನಗೆ ಸಂತೋಷ. ಆಗಲಪ್ಪ, ಈ ಹಾಲನ್ನೂ ತಿಪ್ಪೆಗೆ ಸುರಿದುಬಿಡುತೇನೆ' ಎಂದು ಕೂಗಾಡುತ್ತ ಹಾಲಿನ ಪಾತ್ರೆಯನ್ನೇ ಹಿತ್ತಲ ಬಾಗಿಲಿಂದ ಹೊರಗೆ ಎತ್ತಿ ಬಿಸಾಡಿದ. ಇನ್ನೂ ಸಿಟ್ಟು ಮಿತಿ ಮೀರಿತು. ಬಚ್ಚಲ ಮನೆಯಲ್ಲಿದ್ದ ಮಚ್ಚನ್ನು ತುಡುಕಿಕೊಂಡು ಬಂದು 'ನಾನು ನಿಮ್ಮೆಲ್ಲರ ಮುಂದೆ ಶಿರಪಾಡ ಆಡಿಬಿಡುತೇನೆ. ಆಗ ನಿಮಗೆ ತೃಪ್ತಿ. ನೀನೂ ಅವಳ ಕಡೆ ಹೋದೆಯಾ? ಎಂದು ಮಚ್ಚಿನೊಡನೆ, ರುದ್ರರೂಪ ತಾಳಿ ಸಿದ್ಧವಾಗಿ ಕುಳಿತುಬಿಟ್ಟ. ಬಲು ಗಾಬರಿಯಾಯಿತು. ಅಮ್ಮ ನದಿಗೆ ಹೋಗಿದ್ದಳು. ನನಗೇನೂ ತೋಚಲಿಲ್ಲ. ನನ್ನ ಹೆಂಡತಿಯನ್ನು ಕಾಲಿಂದ ಒದೆದು, ಓಡಿಹೋಗಿ ಅಪ್ಪನ ಕೈಯಲ್ಲಿದ್ದ ಮಚ್ಚನ್ನು ಕಸಿದುಕೊಂಡೆ. ಆಗ ಅಪ್ಪನ ಕೋಪ ಇಳಿಯಿತು. ಹಣೆಯ ಶೂಲೆ. ನನ್ನ ಕಾಲಿನ ಒದೆ -- ಇವುಗಳಿಂದ ಅವಳು ಬಹಳ ಹೊತ್ತು ವಿಲಿವಿಲಿ ಒದ್ದಾಡಿದಳು. ಅಂದಿನಿಂದ ನಾನು ಅಪ್ಪನಿಗೆ ಎದುರಾಡಲು ಹೋಗುವುದಿಲ್ಲ. ಅವನು ಯಾರನ್ನಾದರೂ ಹೊಡೆಯಲಿ, ಏನಾದರೂ ಹೊಡೆಯಲಿ ; ಮನೆಯಲ್ಲೇನಾದರೂ ಮಾರಾಮಾರಿ ಶುರುವಾದರೆ ತಕ್ಷಣವೆ ಮನೆ ಬಿಟ್ಟು ಬಂದುಬಿಡುತೇನೆ. ನಮ್ಮಮ್ಮನೂ ನಮ್ಮಪ್ಪನಂತೆಯೆ. ನಾನೇನಾದರೂ ನನ್ನ ಹೆಂಡತಿಯ ಕಡೆ ಮಾತಾಡಿದರೆ ನಮ್ಮ ತಾಯಿ ನೆಲಕ್ಕೆ ತಲೆತಲೆ ಚಚ್ಚಿಕೊಂಡುಬಿಡುತಾಳೆ. ಆದುದರಿಂದ ಅವರು ಮಾಡುವುದು ತಪ್ಪೆಂದು ನನಗೆ ತೋರಿದರೂ ಎರಡು ಪ್ರೇಮದ ನಡುವೆ ದಿಕ್ಕು ತೋಚದೆ ಹೊರಗೆ ಬಂದುಬಿಡುತೇನೆ.

"ಇಂದು ಬೆಳಗ್ಗೆ ಸುತ್ತಿಟ್ಟ ಹಾಸಿಗೆಗಳು ಮೇಲಿಂದ ಇದ್ದಕ್ಕಿದ್ದಂತೆ ಬಿದ್ದುವು. ಅವುಗಳ ಕೆಳಗೆ ನನ್ನ ನಾಲ್ಕನೆಯ ಮಗು ಸಿಕ್ಕಿಕೊಂಡಿತು. ನನ್ನ ಹೆಂಡತಿ 'ಅಯ್ಯೋ ಕೂಸು!' ಎಂದು ಓಡಿ ಬಂದಳು. ನಮ್ಮಪ್ಪ 'ಅವಿವೇಕಿ! ಹಾಸಿಗೆಗಳನ್ನು ಹಾಗೆಯೆ ಇಡುವುದೇನು?....ನಿನಗೇನು ; ಯಾರಪ್ಪನಮನೆ ಗಂಟು ಹೋಗುತ್ತೆ' ಎಂದು ಕಿರಿಚುತಾ ಮಡಿಕೋಲು

ಹಿಡಿದು ಬಂದುಬಿಟ್ಟ, ಆತನಿಗೆ ಮಗುವಿಗಿಂತ ಬಿದ್ದ ಪಾಸಿಗೆ ಮುಖ್ಯವಾಯಿತು; ಆಕೆಯನ್ನು ಹೊಡೆಯುವುದು ಅಗತ್ಯವಾಯಿತು. ಆಕೆ ಪಾಸಿಗೆಯನ್ನು ತಳ್ಳಿ, ಮಗುವನ್ನೆತ್ತಿಕೊಂಡಳು. ಆದರೆ ನಮ್ಮಪ್ಪ ಮಡಿಕೋಲಿನಲ್ಲಿ ನಾಲ್ಕು ಏಟು ಕೊಟ್ಟುಬಿಟ್ಟ. ಮಗು ಅಳುವುದಕ್ಕೆ ಮೊದಲು ಮಾಡಿತು. ಹಿತ್ತಲಲ್ಲಿ ಕಟ್ಟಿಗೆ ಕಡಿಯುತಿದ್ದ ನನಗೆ ತುಂಬ ಸಿಟ್ಟು ಬಂತು ಏನು ಮಾಡಲಿ ಕೊಡಲಿಯನ್ನು ಅಲ್ಲಿಯೆ ಬಿಟ್ಟು ಸುಮ್ಮನೆ ಹೊರಟು ಬಂದುಬಿಟ್ಟೆ. ದಾರಿಯಲ್ಲಿ ಒಂದು ಚಿತ್ರ ನೋಡಿದೆ. ಅದೊಂದು ಭಿಕ್ಷುಕರ ಸಂಸಾರ. ಮಲಮಗಳು ರೋಗಿಯಾದ ಮಲತಾಯಿಯನ್ನು ಗುಟ್ಟೆಬಟ್ಟೆಯ ಮೇಲೆ, ಅವಳ ಬಿಡಿಕಾಸನ್ನೂ ಅವಳಿಗೆ ಕೊಡದೆ ಓಡಿಸಿಬಿಟ್ಟಳು. ದುಡಿಯಲಾರದ ಆಕೆ ಗೋಳಿಡುತಿದ್ದಳು. ನನ್ನ ಹೆಂಡತಿಯೂ ಒಬ್ಬ ಮಲಮಗಳು, ಆದರೆ ಅವಳ ಮಲತಾಯಿ ಸಾರಿಯುಂತಿದಾಳೆ. ನಮ್ಮ ಮನೆಗಿಂತ ತವರು ಮನೆಯಲ್ಲಿ ಆಕೆಗೆ ಬಲು ಕಷ್ಟ. ಅಲ್ಲಿ ದುಃಖಪಟ್ಟು ಪಟ್ಟು ನಮ್ಮ ಮನೆ ಸೇರಿದರೆ ಇಲ್ಲಿಯೂ ಆಕೆಗೆ ಸುಖವಿಲ್ಲ. ನಾಲ್ಕು ಮಕ್ಕಳ ತಾಯಿ. ಅದೂ ಅಲ್ಲದೆ ಈಗ ಆರು ತಿಂಗಳ ಗರ್ಭಿಣಿ. ಹುಟ್ಟಿದಂದಿನಿಂದ ಅವಳ ಬಾಳು ಹೀಗೆಯೆ ಕಳೆಯಿತಲ್ಲ ಎಂದು ಬಲು ದುಃಖವಾಗುತದೆ."

"ಏನು ಮಾಡುವುದು. ಅವರವರ ಕರ್ಮ. ನಾನೂ, ಆದುದರಿಂದಲೇ ನಿಮ್ಮಪ್ಪನಿಗೆ ನಾಲ್ಕು ಮಾತು ಹೇಳೋಣ ಎಂದುಕೊಳ್ಳುತೇನೆ. ತಕ್ಷಣವೆ ನಮಗೇಕಪ್ಪ, ಹೆರರ ಮನೆಯ ಚಿಂತೆ ಎನಿಸಿಬಿಡುತ್ತೆ ಮನೆಯಲ್ಲಿ ಸಂಸಾರ ಒಂದಾಗಿರಬೇಕು. ಒಬ್ಬರಿಗೊಬ್ಬರಿಗೆ ನಿಕಟವಾದ ಬೆಸುಗೆ ಇರಬೇಕು. ಇರುವ ಪ್ರತಿಯೊಬ್ಬರೂ ಸಂಸಾರ ನಡಸಲು ಅತ್ಯಾವಶ್ಯಕ, ಎನ್ನಿಸಿರಬೇಕು. ಒಬ್ಬರನ್ನೊಬ್ಬರು ಪರರಂತೆ ಕಂಡರೆ, ಅನುಮಾನ ಪ್ರಕೃತಿ ಹೊಂದಿದರೆ ಇದೇ ಗತಿ. ಸಂಸಾರದಲ್ಲಿ ಹೊಂದಿಕೆ ಇರದಿದ್ದರೆ ಖಂಡಿತ ಆ ಸಂಸಾರ ಬೆಳೆಯುವುದಿಲ್ಲ. ಆಗ ಅದು ಭಾಗವಾಗುವುದೇ ಒಳ್ಳೆಯದು. ಅದರಲ್ಲಿಯೂ ಮನುಷ್ಯನಿಗೆ ಸಿಟ್ಟಿರಬಾರದು. ಸಿಟ್ಟು ಕಡಮೆಯಾದಷ್ಟೂ ಕಷ್ಟ ಕಳೆಯುತದೆ ಓಹೋ ಎಷ್ಟು ಬೇಗ ಮನೆ ಬಂದುಬಿಟ್ಟಿತು. ಇನ್ನು ಹೊರಡುತೀಯ? ನಾನು ಮುಂದೆ ಹೊರಡುತೇನೆ. ಆಗಲೆ ಎರಡು ಗಂಟೆ ಎಂತ ಕಾಣುತ್ತೆ"

ಕೃಷ್ಣಮೂರ್ತಿ. ಎಡಸಾಲಿನ ತನ್ನ ಮನೆಯ ಮೆಟ್ಟಲು ಹತ್ತಿದ.

ಮನೆ ದೊಡ್ಡದು. ಎರಡು ಅಂತಸ್ತಿನ ಬಹಳ ಹಳೆಯ ಕಟ್ಟಡ. ಹತ್ತಂಕಣ ವಿದೆ. ದೊಡ್ಡ ಅಂಗಳವಿರುವ ಭವಂತಿ ಮನೆ. ತುಂಬ ಅಚ್ಚುಕಟ್ಟಾಗಿದೆ.

ತಿಪ್ಪಾಜೋಯಿಸರು ಮುಂದೆ ಹೊರಟರು.

೨

ಕೃಷ್ಣಮೂರ್ತಿ ನಡುಮನೆಗೆ ಬಂದ. ಕಂಬದ ಹತ್ತಿರ ಅಂಗವಸ್ತ್ರ ಹಾಸಿಕೊಂಡು ಸೂರಪ್ಪನವರು ಮಲಗಿದ್ದರು. ನಿದ್ದೆ ಬಂದಿರಲಿಲ್ಲ. ಕಿಟ್ಟು ವಿನ ನೆರಳು ಬಿದ್ದಕೂಡಲೆ ಅವನ ಕಡೆ ತಿರುಗಿ "ಏನು ಕಿಟ್ಟಣ್ಣ, ಇಷ್ಟು ಹೊತ್ತು ಎಲ್ಲಿ ಹೋಗಿದ್ದೆ?" ಎಂದು ಕೇಳಿದರು. "ಇಲ್ಲ. ಇಲ್ಲೆ, ಹಿಂದಿನ ಬೀದಿಯಲ್ಲಿ ಕೆಳಗಿನ ಮನೆಯ ಶಾಮಣ್ಣ ಗಂಡಭೇರುಂಡದ ಚಿತ್ರ ಬರೆದುಕೊಡು, ಎಂದ. ಅಲ್ಲಿದ್ದೆ" ಎಂದು ಹೇಳುತ್ತಾ ಅಂಗಿಯನ್ನು ಕಳಚಿ, ಎಡಭಾಗದ ಕೋಣೆಯೊಳಗೆ ಹೆಜ್ಜೆಯಿಟ್ಟ. ತಾಯಿ ರೇಶಿಮೆ ದುಪ್ಪಟಿ ಹಾಸಿಕೊಂಡು ಮಲಗಿದ್ದಳು; ಆಕೆಗೂ ನಿದ್ದೆ ಬಂದಿರಲಿಲ್ಲ. ತನ್ನ ಹೆಂಡತಿ ಮಲಗುವ ಬಲಭಾಗದ ಕೋಣೆಯ ಕಡೆ ತಿರುಗಿದ; ಆ ಕಡೆ ಹೆಜ್ಜೆಯಿಟ್ಟ. ತಾಯಿ "ಕಿಟ್ಟು, ಊಟಕ್ಕೇಳೋ. ಅವಳನ್ನೇನು ಮಾತಾಡಿಸುತಿ. ಎಷ್ಟು ಹೊತ್ತಾಯಿತು! ಎಂಜಲು ಗೋಮ ಆರಿ ಯಾವ ಕಾಲವಾಯಿತು" ಎಂದಳು.

"ಎಲ್ಲರ ಊಟವೂ ಆಯಿತೆ?"

"ಎಲ್ಲರದೂ ಆಯಿತು. ನಿಂದೊಬ್ಬನದೇ" ಎಂದು ಹೇಳುತ ಮಗನೊಡನೆ ಅಡುಗೆಮನೆಯ ಕಡೆ ಹೊರಟಳು.

"ಅವಳದೂ ಆಯಿತೆ?"

"ಇಲ್ಲ"

"ಹುಡುಗರದು?"

"ಆಯಿತು"

"ಅವಳೇಕೆ ಊಟಮಾಡಲಿಲ್ಲ?"

"ಅವಳನ್ನೇ ಕೇಳು"

ಎಲೆ ಹಾಕಿ ಬಡಿಸಿದ್ದಾಯಿತು. ಕಿಟ್ಟು ಊಟಕ್ಕೆ ಕುಳಿತಿದ್ದಾಯಿತು. ಊಟ ಮಾಡುತ್ತಿದ್ದ.

ತಾಯಿಯ ಹೆಸರು ನಂಜಮ್ಮ; ವಿಷಮೂರ್ತಿ. ಆದರೆ ಕೆಂಪಗೆ

ಕುಳ್ಳಗೆ ದಪ್ಪಗೆ ಆಕಾರ. ಕಿವಿಯೊಳಗೆ ಮುತ್ತಿನ ಓಲೆ. ಕೊರಳಲ್ಲಿ ಐದು ಎಳೆ ಚೈನು ಸರ ಕೈಯೊಳಗೆರಡು ಜೊತೆ ಬಳೆ ಹಣೆಯಮೇಲೆ ಅತಿ ಆಚಾರ ತೋರಿಸುವ ದೊಡ್ಡ ಅಡ್ಡ ಕುಂಕುಮ. ವಯಸ್ಸು ಐವತ್ತರ ಹತ್ತಿರ ವಿದ್ದರೂ ಸುಖದ ಜೀವನ ಆಕೆಯನ್ನು ಇನ್ನೂ ಎಳೆತನದಲ್ಲಿಟ್ಟಿತ್ತು. ಕಪ್ಪುಸೀರೆಯಿ ಆಕೆಯ ಚೆಲುವಿಗೊಪ್ಪುತ್ತಿದ್ದುದರಿಂದ ಯಾವಾಗಲೂ ಕಪ್ಪು ಸೀರೆಯನ್ನೇ ಉಡುವುದು. ಕಿಟ್ಟು ಮಜ್ಜಿಗೆ ಕೇಳಿದ. ಮಜ್ಜಿಗೆ ಬಡಿಸುತ್ತ,

" ಏನೆಂತ ಮದುವೆ ಮಾಡಿಕೊಂಡೆಯೋಪ್ಪ. ಬೀದಿಯಲ್ಲಿ ಹೋಗುವ ಮಾರಿ ಮನೆ ಹೊಕ್ಕ ಹಾಗಾಯಿತು. ಅಯ್ಯೋ, ಅಯ್ಯೋ ಏನು ಅವಾಂತರ ಇವೊತ್ತು ಅವಳದು ! ಹಾಸಿಗೆಯನ್ನೆಲ್ಲ ಕೆಡವಿ, ಸಾವಿರ ಮನೆಗೆ ಕೇಳಿಸುವಂತೆ ಕಿರಿಚಿ, ಅವರ ಕೋಲಿನ ಒಂದು ಹೊಡೆತಕ್ಕೇ ನಡು ಬೀದಿಗೆ ಓಡಿ ಹೋಗುವುದೆ ! ಹೊಡೆದ ಏಟು ಅವಳಿಗೆ ತಾಕಲೇ ಇಲ್ಲ. ಲಾಂದ್ರದ ಚಿಮಣಿ ಚೂರಾಯಿತು. ಈಗ ಕಾಳಿಯ ಅವತಾರ ತಾಳಿ ಕೊಂಡು ಊಟಮಾಡದೆ ಕೋಣೆಯಲ್ಲಿ ಬಿದ್ದಿದಾಳೆ. ನಮ್ಮ ಮೇಲಿನ ಸಿಟ್ಟಿಗೆ ಕಿವಿಯನ್ನು ಹರಿದುಕೊಂಡು, ನಾವೇ ಹಾಗೆ ಮಾಡಿದೆವೆಂದು ನಿನಗೆ ತಿಳಿಸಲು ಸಿದ್ಧಳಾಗಿದಾಳೆ. ಮದುವೆಯಲ್ಲಿ ಮಾಡಿಸಿದ ಭಂಗಾರ ದಂಥ ಓಲೆ ಕಿತ್ತು ಬಂದಿದೆ. ಮಕ್ಕಳನ್ನೂ ಮಲಗಿಸಿಕೊಂಡು ಕೋಣೆ ಯಲ್ಲಿ ಮಲಗಿದಾಳೆ. ನೋಡು, ಮಾತಾಡಿಸು. ಯಾಕೊ ದಿನದಿನಕ್ಕೂ ಇದು ಕೆಡುತ್ತಿದೆ. ಇನ್ನು ಸಾಧ್ಯವಿಲ್ಲಪ್ಪ. ನಾವಾದರೂ ಮನೆ ಬಿಟ್ಟು ಹೊರ ಡಬೇಕು, ಅಥವಾ ನೀನು, ನಿನ್ನ ಹೆಂಡತಿ ಮಕ್ಕಳು ಹೊರಡಬೇಕು."

ಮಗನ ಊಟ ಮುಗಿಯಿತು ; ಎಲ್ಲವನ್ನೂ ಸುಮ್ಮನೆ ಕೇಳುತ್ತಿದ್ದ; ಉತ್ತರ ಕೊಡಲಿಲ್ಲ. ಕೈತೊಳೆದುಕೊಂಡು ಒರಸಿಕೊಳ್ಳುತ್ತ ಹೆಂಡತಿಯಿದ್ದ ಕೋಣೆಯ ಕಡೆ ಹೊರಟ. ನಂಜಮ್ಮ " ಲಲಿತಾ, ಈ ಎಲೆ ಬಳಿದು ಗೋಮ ಹಚ್ಚು " ಎಂದು ಕೂಗಿದರು. ಕೂಡಲೆ ಕೋಣೆಯೊಳಗಿದ್ದ ಹದಿ ಮೂರು ವರುಷದ ಹುಡುಗಿ ಅಡುಗೆಮನೆಗೆ ಓಡಿಹೋದಳು. ನಡುಮನೆ ಯಲ್ಲಿ ಮಲಗಿದ್ದ ಸೂರಪ್ಪನವರು ಹೆಂಡತಿಯ ಕೋಣೆಯ ಕಡೆಗೆ ಹೊರ ಟಿದ್ದ ಕಿಟ್ಟುವನ್ನು ಕಂಡು " ಕಿಟ್ಟಣ್ಣ " ಎಂದರು. " ಏನಪ್ಪಾ " ಎನ್ನುತ್ತ ಕೋಣೆಯ ಕಡೆ ಹೆಜ್ಜೆಯಿಟ್ಟಿದ್ದ ಕೃಷ್ಣಮೂರ್ತಿ ತಂದೆಯ ಹತ್ತಿರ ಬಂದ

" ಕುಳಿತುಕೋ, ಹೇಳುತೇನೆ " ಎಂದು ತಂದೆ ಮಲಗಿಕೊಂಡೆ

ಹೇಳಿದರು. ಮಗ ಕುಳಿತುಕೊಂಡ. ಹೆಂಡತಿಯಿದ್ದ ಕೋಣೆಯ ಕಡೆ ನೋಡಿದ; ಮತ್ತೆ ತಂದೆಯ ಕಡೆ ನೋಡಿದ.

"ಅಲ್ಲೇನು ನೋಡುತೀಯೆ? ನಿನ್ನ ಹೆಂಡತಿ ಬಿದ್ದಿದಾಳೆ. ಅವ ಳಿಂದ ನಮಗೆ ಏನೇನು ತೊಂದರೆ ಬಂತು ನೋಡು. ಎಷ್ಟು ಕಷ್ಟಪಡ ಬೇಕು. ಶ್ರೀಕಂಠಪುರದ ರಾಜಣ್ಣಶೆಟ್ಟಿ ಕಾಗದ ಬರೆದಿದಾನೆ, ನೋಡು" ಎಂದು ತಲೆಯ ಕೆಳಗಿದ್ದ ಕಾಗದಗಳೆರಡರಲ್ಲಿ ಒಂದನ್ನು ಮಗನ ಕೈಗೆ ಕೊಟ್ಟ. ಮಗ ಕಾಗದ ಓದಿಕೊಂಡ.

"ಸರಿ, ಹೇಗಾದರೂ ಮಾಡಿ ಈ ಮನೆ ಹೊಡೆಯಬೇಕೆಂಬುದೇ ಅವನ ಗುರಿ. ಆದುದರಿಂದಲೇ ಈ ಕಾಗದಗಳ ಸುರಿಮಳೆ. ಈ ಮೂರು ತಿಂಗಳಲ್ಲಿ ಸಾವಿರ ರೂಪಾಯಿಯನ್ನಾದರೂ ತೀರಿಸದಿದ್ದರೆ ಈ ಸಲ ಅವನು ತನ್ನ ಇಷ್ಟದಂತೆ ಮಾಡೇ ಮಾಡುತಾನೆ. ಮೂರು ತಿಂಗಳೊಳಗೆ ಅಷ್ಟು ಹಣ ಕೊಡಲೇ ಬೇಕಲ್ಲ?"

"ಎಲ್ಲಿಂದ ತರುವುದು ಅಷ್ಟೊಂದು ಹಣ! ಹೋದ ವರುಷ ಅಂಥ ಒಳ್ಳೆಯ ಜಮೀನು ಮಾರಿದ್ದಾಯಿತು. ಈ ವರುಷ ಏನೂ ಫಲಿಸಲಿಲ್ಲ. ಇಷ್ಟು ದೊಡ್ಡ ಸಂಸಾರದಲ್ಲಿ, ಈ ಸೊಸೆ ಮೊಮ್ಮಕ್ಕಳ ಕಾಟದಲ್ಲಿ ಹೊಟ್ಟೆ ಪಾಡು ಕರೆಯುವುದೇ ಕಷ್ಟವಾಗಿದೆ. ವರುಷಕ್ಕೊಂದೊಂದು ಪಿಳ್ಳೆ ಬೇರೆ ಹೆಚ್ಚಾಗುತಿದೆ. ಇನ್ನು ಮೇಲೆ ಅವುಗಳಿಗೆ ಒಂದಾದ ಮೇಲೊಂದು ಉತ್ಸವ ಗಳಾಗಬೇಕು. ನನಗೇನು ತೋಚುವುದೇ ಇಲ್ಲಪ್ಪ...?

ನಂಜಮ್ಮ "ಲಲಿತಾ, ನಿಮ್ಮಮ್ಮನನ್ನು ಕಳಿಸೇ. ಮುಸುರೆ ಹೊರಗೆ ಹಾಕಿದೇನೆ. ತಿಕ್ಕುವುದಕ್ಕೆ ಹುಣಿಸೆಹಣ್ಣಿಲ್ಲ. ಶಾರದಮ್ಮನವರ ಮನೆಯಲ್ಲಿ ಸಾಲ ತೆಗೆದುಕೊಂಡು ಬರಲಿ" ಎಂದು ಒಳಗಿಂದ ಒದರಿದರು.

ನೋವಿನಿಂದ ಮಲಗಿದ್ದ ಸೊಸೆ, ಕೂಗು ಕೇಳುತ್ತಲೆ ಎದ್ದು ಹಿತ್ತಲ ಕಡೆ ಹೋದಳು. ಮುಸರೆಯ ಪಾತ್ರೆಗಳನ್ನೆಲ್ಲ ಅಂಗಳದಲ್ಲಿ ಹಾಕಿ, ಪಕ್ಕದ ಮನೆಯ ಶಾರದಮ್ಮನವರಿಂದ ಹುಣಿಸೆಹಣ್ಣು ತರಲು ಹೊರಟಳು.

ನಡುಮನೆಯಲ್ಲಿ ಸೂರಪ್ಪ "ಇನ್ನೊಂದು ಕಾಗದ ಬಂದಿದೆ ಕಿಟ್ಟಣ್ಣ. ನಾನು ಮಾಡಿಕೊಂಡಿರುವ ಏರ್ಪಾಡಿಗೆ ನೀನು ಒಪ್ಪಿದರೆ ಈ ಮೊದಲ ನೆಯ ಕಾಗದದ ತೊಂದರೆಯನ್ನೂ ಪರಿಹರಿಸಿಕೊಳ್ಳಬಹುದು; ಎರಡ ನೆಯ ಕಾಗದದವರಿಗೂ ಸಂತೋಷಪಡಿಸಬಹುದು" ಎಂದು ಹೇಳುತ್ತ ಆ ಇನ್ನೊಂದು ಕಾಗದವನ್ನು ಮಗನ ಕೈಗೆ ಕೊಟ್ಟರು. ಮಗ ಓದಿಕೊಂಡ.

ಮುಖ ತುಂಬ ಚಿಕ್ಕದಾಯಿತು. ತಂದೆ ಮಗನ ಮುಖ ನೋಡಿದ.

"ಅಯ್ಯೋ ಚಿಪ್ಪೆ! ನಾನು ಅದಕ್ಕೇ ನಿನಗೆ ಮೊದಲು ಹೇಳಿದ್ದು. ನೀನು ನನ್ನ ಏರ್ಪಾಡಿಗೆ ಒಪ್ಪಿದರೆ ನನಗೆ ಸುಖ, ಇಲ್ಲದಿದ್ದರೆ ತೊಂದರೆ ಪರಿಹರಿಸುವುದಿಲ್ಲ, ಎಂದು"

"ಈಗ ಆಗಿರುವುದು?"

"ಆಗಿರುವುದರಿಂದೇನು ಸುಖ? ಮೂರು ಕಾಸಿನ ಪ್ರಯೋಜನ ವಿಲ್ಲ. ಮನೆ ತುಂಬ ಮಕ್ಕಳು, ಅಷ್ಟೆ"

"ಇನ್ನೇನಾಗಬೇಕಪ್ಪ?"

"ಇದೇ, ನನಗೆ ಸರಿಬೀಳದು. ಹಣಕೊಟ್ಟು ಕೊಡುತೇವೆ, ಎಂದು ಬಂದರೆ, ಅದೇಕೆ ನನಗೆ? ಎಂದು ಕೇಳುತೀಯಲ್ಲ! ನಿನಗೆ ಎಷ್ಟು ಬುದ್ಧಿಯಿದೆ ಎಂದು ಹೇಳೋಣ ...ಅದೆಲ್ಲ ಬೇಡ. ನೀನು, ನಿನ್ನ ಈ ಹೆಂಡತಿ ಮಕ್ಕಳು ನಮ್ಮ ಮನೆಯಲ್ಲಿರಬೇಕೆಂದು ನಿನ್ನ ಇಷ್ಟವಿದ್ದಲ್ಲಿ ಈ ಏರ್ಪಾಡಿಗೆ ಒಪ್ಪಿಕೊ. ನಾನು ಜಾತಕವನ್ನು ಅವೊತ್ತೆ ಕಳಿಸಿಬಿಟ್ಟಿದ್ದೆ. ಜಾತಕವೂ ಕೂಡಿವೆಯಂತೆ. ಮುಂದಿನ ವೈಶಾಖದೊಳಗೆ ಆಗಿಹೋದರೆ ತುಂಬ ಅನುಕೂಲ. ಶೆಟ್ಟಿಯ ಸಾಲವನ್ನೂ ತೀರಿಸಬಹುದು ...ಯಾರಾದರೂ ನಮ್ಮ ಮಾತು ಕೇಳಿದರೇನು? ಯಾರೂ ಇಲ್ಲವಲ್ಲ?"

"ಇಲ್ಲ. ಅವಳು, ಲಲಿತ ಇಬ್ಬರೂ ಹಿತ್ತಲಲ್ಲಿರಬಹುದು. ಮಕ್ಕಳು ಮಲಗಿವೆ. ಯಾರಿಗೂ ಕೇಳಿಸಿಲ್ಲ."

'ಹಾಗಾದರೆ, ಈ ಏರ್ಪಾಡಿಗೆ ನೀನು ಒಪ್ಪಲೇ ಬೇಕು."

' ಆದರೆ ಇವರ ಪಾಡು?"

"ಇವರೂ ಇರುತಾರೆ. ಎಷ್ಟೋ ಜನರಿಗೆ ಇಬ್ಬರು ಹೆಂಡಿರಿಲ್ಲವೇನು?"

' ನನಗೆ . . . . ಬಹಳ ತೊಂದರೆಯಾಗುವುದಿಲ್ಲವೆ?"

"ನಿನ್ನ ಸುಖ ನೋಡಲು ಹೋದರೆ ಒಟ್ಟು ಸಂಸಾರಕ್ಕೇ ದೊಡ್ಡ ಕಷ್ಟ ಬರುತದೆಯಲ್ಲ! ಶೆಟ್ಟಿಗೆ ಹಣ ಕಳಿಸಬೇಕು."

"ಆಗಲಿ, ನಿನ್ನ ಇಷ್ಟಬಂದಂತೆ ಮಾಡಪ್ಪ"

"ನಾನು ಒಪ್ಪಿದ್ದೇನೆಂದು ಇಂದೇ ಅವರಿಗೆ ಪತ್ರ ಬರೆಯುತೇನೆ."

ಅಂಗಿ ಹಾಕಿಕೊಳ್ಳುತ್ತಾ "ಹ್ಞೂ" ಎಂದು ಕೃಷ್ಣಮೂರ್ತಿ ಹೊರಗೆ ಹೊರಟ.

* * *

ಶಾರದಮ್ಮನವರಿಗೆ ಸೂರಪ್ಪನವರ ಸೊಸೆ ಸೀತಮ್ಮನನ್ನು ಕಂಡರೆ ತುಂಬ ಪ್ರೀತಿ ತನಗೆ ಮಕ್ಕಳೇ ಇಲ್ಲ. ತಾನು ತನ್ನ ಗಂಡ ಇಬ್ಬರೇ ಮನೆಯಲ್ಲಿ. ಸೀತಮ್ಮನ ಮಕ್ಕಳೇ ತನ್ನ ಮಕ್ಕಳೆಂದು ಭಾವಿಸಿದ್ದಳು. ಆಕೆಯನ್ನೂ ಮಗಳಂತೆ ಕಾಣುತ್ತಿದ್ದಳು. ಹುಣಸೆಹಣ್ಣಿಗಾಗಿ ಬಂದ ಸೀತಮ್ಮನನ್ನು ಕರೆದು ಕುಳ್ಳಿರಿಸಿಕೊಂಡು, ಶಾರದಮ್ಮ ಸುಮ್ಮನೆ ಅತ್ತು ಬಿಟ್ಟಳು. "ಸೀತಮ್ಮ, ನೀನಲ್ಲದೆ ಇನ್ನೊಬ್ಬರಾಗಿದ್ದರೆ ಊರಿಗೆ ಊರೇ ಎದ್ದು ಬರುವ ಹಾಗೆ ಗುಲ್ಲೆಬ್ಬಿಸಿಬಿಡುತ್ತಿದ್ದರು. ಕೋಲಿನಿಂದ ಮರಕ್ಕೆ ಬಡಿಯುವಹಾಗೆ ಸಿಕ್ಕಪಟ್ಟೆ ಹೊಡೆಯುವುದೇ, ಆರು ತಿಂಗಳು ಬಸಿರು ಹೆಂಗಸಿಗೆ? ಏನಾದರೂ ಅನಾಹುತ ನಡೆದರೆ ಸರಕಾರದವರು ಸುಮ್ಮನೆ ಬಿಟ್ಟಾರೆ ಇವನನ್ನು? ಅಯ್ಯೋ ಅಯ್ಯೊ ಮುಖವೆಲ್ಲ ಕೆಂಪೇರಿಬಿಟ್ಟಿದೆ ಯಲ್ಲೆ! ಓಲೆ ಕೂಡ ಕಿತ್ತು. ಕಿವಿ ಹರಿಯುವಂತೆ ಹೊಡೆದಿದಾನಲ್ಲ, ಚಂಡಾಲ, ಪಾಪಿ. ಅನ್ನ ಕೂಡ ಹಾಕಿರಲಿಕ್ಕಿಲ್ಲ ಊಟ ಮಾಡಿದೆ ಯೇನು?"

"ಇಲ್ಲ.......... ಹುಣಸೆಹಣ್ಣು ಕೊಡಿ, ಶಾರದಮ್ಮ. ಹೋಗು ತೇನೆ. ಮುಸುರೆಯನ್ನು ಅಂಗಳದಲ್ಲಿ ಹಾಕಿದೇನೆ. ಮೊನ್ನೆ ಕಾಗೆ ಒಂದು ಚಮಚ ಎತ್ತಿಕೊಂಡು ಹೋಗಿಬಿಟ್ಟಿತ್ತು. ಅಟ್ಟಿಸಿಕೊಂಡು ಹೋದೆ. ಅರಳಿ ಮರದ ಕಟ್ಟೆಯ ಹತ್ತಿರ ಹಾಕಿ ಹೊರಟುಹೋಯಿತು"

"ಹಾಗಾದರೆ ಬಾ, ಇಲ್ಲಿ. ನೀನು ಬಸಿರು ಹೆಂಗಸು. ಉಪವಾಸ ಇರಬಾರದು. ನೀನು ಇದ್ದರೂ ಚಿಂತೆಯಿಲ್ಲ. ಒಳಗಿರುವ ಆ ಜೀವಿ ನಿನ್ನನ್ನು ಶಪಿಸುತದೆ. ಬಾ. ಕುಳಿತುಕೊ. ಎಲೆ ಹಾಕುತೇನೆ"

"ಬೇಡ, ಶಾರದಮ್ಮ, ನಾನು ಊಟಮಾಡುವುದಿಲ್ಲ. ಬಹಳ ಹೊತ್ತಾಯಿತು. ಕೆಲಸ ವಿಪರೀತ ಇದೆ"

"ಹಾಗಾದರೆ, ಈರುಳ್ಳಿ ಆಲೂಗಡ್ಡೆ ಹುಳಿ ಮಾಡಿದೇನೆ. ಕಲಸಿ ಕೈ ತುತ್ತು ಹಾಕುತೇನೆ ಬಾ. ನಿನಗಿದು ಅಪರೂಪ"

ಸೀತಮ್ಮನಿಗೆ ತುಂಬ ಬಯಕೆ. ಬಾಯಲ್ಲಿ ನೀರೂರಿತು. 'ಆಗಲಿ' ಎಂದು ಕುಳಿತಳು. ಶಾರದಮ್ಮ ಅನ್ನ ಕಲಸಿ ಕೈತುತ್ತು ಹಾಕಿದಳು.

ಮೂವತ್ತು ವರುಷ. ಹುಟ್ಟಿದಂದಿನಿಂದಲೂ ಸುಖ ಕಾಣದವಳು. ಜಗತ್ತಿನಲ್ಲಿ ಹೆಣ್ಣಾಗಿ ಹುಟ್ಟಬಾರದೆಂಬ ಹೆಂಗಸರ ನಿರ್ಣಯವನ್ನು ಪುಷ್ಟೀ ಕರಿಸುವ ನಿದರ್ಶನ ನಮ್ಮ ಸೀತಮ್ಮ. ಹೊತ್ತು ಹೊತ್ತಿಗೆ ಅನ್ನ ನೀರು,

ಎಣ್ಣೆ ನೀರು ಇಲ್ಲದೆ ಕಷ್ಟದ ಕೊರಗಿನಲ್ಲಿ ಕುಗ್ಗಿದ, ಬತ್ತಿದ ಚಕ್ಕೆವ್ಯೆ. ಆದರೂ ಎಣ್ಣೆಗೆಂಪಿನ ಚೆಲುವೆ. ದುಂಡು ಮುಖ. ತೊಂಡೆ ಹಣ್ಣಿನ ತುಟಿ. ಸ್ಫುರದ್ರೂಪಿ ಹೆಣ್ಣನ್ನು ಹೇಗೆ ಹೇಗೆ ವರ್ಣಿಸಬಹುದೊ ಅದೆಲ್ಲ ಸೀತ ಮ್ಮನಿಗೊಪ್ಪುತ್ತದೆ. ಆಗಾಗ ದಂಡನೆಗೆ ಸಿಕ್ಕಿ ಕೋಮಲದೇಹ ಅಲ್ಲಲ್ಲಿ ಪೆಟ್ಟಿನ ಕಲೆ ಹೊತ್ತಿದೆ. ಬೆಳಗ್ಗೆ, ಮಾವನ ಕೋಲಿನ ಹೊಡೆತ, ತೋಳು ಮೊಳಕ್ಕೆ ಮೇಲೆಲ್ಲ ಗೀರುಗೀರು ಬರೆ ಹಾಕಿಬಿಟ್ಟಿದೆ. ಬಣ್ಣ ತಿರುಗಿದ ಗರ್ಭಿಣಿ. ಮಾವನ ಕೈವುಗುರಿನ ಹಿಡಿತಕ್ಕೆ ಸಿಕ್ಕಿ ಗಲ್ಲ ಕೆಂಪೇರಿ ದಪ್ಪ ನಾಗಿದೆ. ಗಡಿಬಿಡಿಯಲ್ಲಿ ಓಲೆ ಜಗ್ಗಿ, ರಕ್ತ ಕಟ್ಟಿದೆ. ಅತ್ತೆ ಮಾವನ ಹುಚ್ಚುತುಳಿತದಿಂದ ಹಾಳಾಗುತ್ತಿರುವ ಇವಳ ರೂಪ ನೋಡಿ ಶಾರದ ಮ್ಮನ ಕರುಳು ಕುದಿಯಿತು. ಆಕೆಯ ಮುಖವನ್ನೇ ನೋಡುತ್ತ ಕೊನೆಯ ತುತ್ತನ್ನು ಹಾಕಿದಳು.

"ಏನೋ ...ಶಾರದಮ್ಮ, ನೀವೊಬ್ಬರು ನನ್ನ ಭಾಗಕ್ಕೆ ಹೆತ್ತ ತಾಯಿಗಿಂತ ಹೆಚ್ಚು. ನನ್ನ ಮುಗಿಲಿನೆತ್ತರದ ದುಃಖ ನಿಮ್ಮ ಮಮತೆಯ ಮಾತಿನಿಂದ ಬೇಗ ಮಾಯವಾಗಿ ಬಿಡುತದೆ ಮುಖ್ಯ, ದೇವರು ತಮಗೆ ಬೇಗ ತಾಯಿ ಆಗುವ ಸುದಿನ ಕಲ್ಪಿಸಲಿ. ಆದರೆ ನನ್ನಂಥ ನಿರ್ಭಾಗ್ಯ ಮಗಳು ಬೇಡ, ಅಥವಾ ನನ್ನ ಯಜಮಾನರಂಥ ಗಂಡು ಮಗ ಬೇಡ. ನಿಮ್ಮ ಮನದಂಥ ವಿಶಾಲ ಬುದ್ಧಿಯ ಹುಡುಗ ಜನಿಸಲಿ. ನನ್ನ ಬಾಳೇ ಕಷ್ಟ ತಿನ್ನಲು ಹುಟ್ಟಿದೆ. ಏನು ಮಾಡುವುದು? ಯಾರು ತಾನೇ ನನ್ನ ಪರವಾಗಿ ಕೊರಗಿ ನನ್ನ ಕೈ ಹಿಡಿದೆತ್ತುವವರಿದಾರೆ? ತವರಲ್ಲಿ ಬರಿದು; ಇಲ್ಲಿಲ್ಲ. ದೇವರು ಬೇಗ ಅವಸಾನ ಕೊಡಲಿ. ಈ ಮಕ್ಕಳೂ ಸಾಕು.... ಆದರೆ ನನ್ನ ಕರ್ಮ! ನನ್ನನ್ನು ಬಿಟ್ಟೀತೆ! ಈಗ ಮತ್ತೊಂದು ಕೊಟ್ಟಿದೆ ... ದೇವರೆ, ಮೈಕೊಳೆವ ಇಂಥ ಕಾಲದಲ್ಲಿಯೆ ಜೀವ ಹೋಗಬಾರದೆ, ಎಂದೆನ್ನಿಸುತದೆ ಜೀವ ಕಳೆದುಕೊಳ್ಳುವುದು ಅತಿ ಸುಲಭ. ಆದರೆ ನಾನು ತಾಯಿ. ಈ ಬತ್ತಿಗಳ ಗತಿಯೇನು? ಅವುಗಳಿಗೆ ನಿಧಾನವಿಷ ಕೊಟ್ಟು ಗೋಳಾಡಿಸಿ ಸಾಯಿಸಿದಂತಾಗುತ್ತದೆ. ನಾನೊಬ್ಬಳು ಮಲ ಮಗಳಾಗಿ ಸುಖ ಕಂಡಿದೇನೆ. ನನ್ನ ಮಕ್ಕಳೂ ಮಲಮಕ್ಕಳಾಗಬೇಕೆ? ಅದ್ದರಲ್ಲಿಯೂ ಈ ಅತ್ತೆಮಾವಂದಿರ ಮಡಿಲೊಳಗೆ! ಆದುದರಿಂದ ನಾನು ಬಾಸುಂಡೆ ತಿಂದರೂ ಸಾವಿಗೆ ಹೆದರುತೇನೆ. ನೀವೆಲ್ಲ ನನ್ನನ್ನು ಮಾತಾ ಡಿಸುತೀರಲ್ಲ. ನನಗೆ ಅದೇ ಆನಂದ. ಹೆರರ ಮನೆಯಲ್ಲಾದರೂ

ನನ್ನ ವರಿದಾರಲ್ಲ, ಎಂದುಕೊಳ್ಳುತೇನೆ" ಎಂದು ಸುಮ್ಮನೆ ಕಣ್ಣೀರಿಟ್ಟಳು.

"ನಿನ್ನನ್ನು ನೋಡಿದರೆ ನನಗೆ ತುಂಬ ದುಃಖವಾಗುತಿದೆ ಸೀತಮ್ಮ. ಏನು ಮಾಡುವುದು, ಹೆಣ್ಣು ಜೀವ ಬಹಳ ಕೆಟ್ಟದು. ಅಳಬೇಡಮ್ಮ. ಹೊಟ್ಟೆಯೊಳಗಿನ ಆ ಜೀವಿಗೆ ಬಹಳ ತೊಂದರೆಯುಂಟಾಗುತದೆ. ಹೆಣ್ಣು ಎಂದೆಂದಿಗೂ ಪರಾಧೀನಳು. ಅವಳಲ್ಲಿ ತಪ್ಪು ಹುಡುಕುವುದು ಅತ್ತೆ ಮಾವಂದಿರಿಗೆ ಅತಿ ಸುಲಭ ಸೊಸೆ ಹೆಚ್ಚು ಮಾತಾಡಿದರೆ ಮಾತಿನ ಮಲ್ಲಿಯಾಗುತಾಳೆ. ಮಾತಾಡದಿದ್ದರೆ ಮೂಕಿಯಾಗುತಾಳೆ. ಮಿತಿಯಿಂದ ನಡೆದರೆ ಬೇಕುಬೇಡದವಳಾಗುತಾಳೆ. ಮಾಡಿದ ಕೆಲಸದಲ್ಲಿ ತಪ್ಪು ಹುಡುಕುವುದೇ ಅವರ ಕೆಲಸ. ಅದೊಂದು ದೌಲತ್ತು–ದೊಡ್ಡಸ್ತಿಕೆ. ಹೆರರ ಮನೆಯಿಂದ ಬಂದ ಹೆಣ್ಣುಮಗಳ ಮೇಲೆ ಹಾರಾಡುವುದೊಂದು ಹಿರಿಯತನ. ಮೊಮ್ಮಕ್ಕಳಿಗೆ ರೋಗ ಬಂದರಂತೂ ಸೊಸೆ ಗುದ್ದಿನ ಮದ್ದು ತಿನ್ನಬೇಕು ಸೊಸೆಗೂ ಮೊಮ್ಮಗುವಿನ ಖಾಯಿಲೆಗೂ ಗಂಟು ಹಾಕಿ ಸೊಸೆಯನು ದಂಡಿಸುವುದು ಅವರ ನಿತ ಕರ್ತವ್ಯ. ಆದರೆ ತವರಿನ ಕಡೆ ಸರಿಯಾದವರಿದ್ದರೆ ಇಂಥ ಅಧಿಕ ಪ್ರಸಂಗಿಗಳ ಬೆನ್ನುಮೂಳೆ ಮುರಿದುಬಿಡಬಹುದು. ನನ್ನ ತಂಗಿಯ ಮಗಳೂ—ಪಾಪ! -- ನಿನ್ನಂತೆಯೆ ಅತ್ತೆಯ ಮನೆಯಲ್ಲಿ ಬಹಳ ಕಷ್ಟಪಟ್ಟಳು. ಗಂಡನೂ ಅತ್ತೆ ಮಾವಂದಿರೊಡನೆ ಸೇರಿಕೊಂಡು, ಆಕೆಯನ್ನು ತುಂಬ ಹೊಡೆಯುತಿದ್ದ. ಕೊನೆಗೆ ಆತ ಆಕೆಯನ್ನು ಬಿಟ್ಟೇಬಿಟ್ಟ. ಆದರೆ ನಮ್ಮ ಅಣ್ಣ ಬೆಂಗಳೂರಿನಲ್ಲಿ ಲಾಯರು. ಆಕೆಯನ್ನು ತನ್ನ ಮನೆಗೆ ಕರಸಿಕೊಂಡು ಅಲ್ಲಿಯೆ ಸುಖವಾಗಿಟ್ಟುಕೊಂಡಿದಾನೆ. ಗಂಡನ ಮೇಲೆ ಕೇಸು ಮಾಡಿಸಿ, ವರ್ಷಕ್ಕೆ ಇನ್ನೂರೈವತ್ತು ರೂಪಾಯಿ ಜೀವನಾಂಶ ಸಿಕ್ಕುವಂತೆ ಮಾಡಿದಾನೆ. ಆದರೆ ಅಂಥ ಅನುಕೂಲ ಎಲ್ಲರಿಗೂ ಬಾ, ಎಂದರೆ ಬರುತದೆಯೆ, ಅಮ್ಮ. ಬಹಳ ಹೊತ್ತಾಯಿತು; ನಿಮ್ಮತ್ತೆ ನನ್ನನ್ನೆಷ್ಟು ಬಯ್ಯುತಾರೊ, ನನ್ನಿಂದಲೂ ನಿನಗೆ ತೊಂದರೆ. ಹಿತ್ತಲ ಕಡೆಯಿಂದ ಅಂಗಳಕ್ಕೆ ಹೊರಟುಬಿಡು."

ಅತ್ತೆ ಮಾವಂದಿರ ಮೇಲಿನ ಆಕ್ಷೇಪಣೆ ಕೇಳುತ್ತ ನಿಂದಿರಲು ಸೀತಮ್ಮನಿಗೆ ಧೈರ್ಯವಿರಲಿಲ್ಲ. ಆದರೆ ಏನುಮಾಡಿಯಾಳು. ತನ್ನ ಕಷ್ಟ ನೋಡಿ ತುಂಬ ನೊಂದು ಶಾರದಮ್ಮನವರು ಮಾತಾಡುತ್ತಿದ್ದಾರೆ. ಅವರ ಮಾತು ಎಂದಿಗೆ ಮುಗಿದೀತೊ, ಎಂದು ಕಾಯುತ್ತ ನಿಂತಿದ್ದಳು.

"ಅತ್ತೆಯವರು ಕೋಣೆಯಲ್ಲಿ ಮಲಗಿರುತಾರೆ. ನಾನು ನಿಮ್ಮ ಮನೆಯಲ್ಲಿ ಇಷ್ಟು ಹೊತ್ತು ಕಳದದ್ದು ಅವರಿಗೆ ತಿಳಿದಿಲ್ಲ. ತಿಳಿದಿದ್ದರೆ ಹೀಗೆ ಸುಮ್ಮನಿರುತಿರಲಿಲ್ಲ. ನಿಮ್ಮ ಮನೆಯ ಇಂದಿನ ಹುಳಿಯನ್ನ ಬಾಯಿಗೆ ಬಲು ರುಚಿಯಾಗಿತ್ತು. ನೀವು ಕಲಸಿ, ಕಲಸಿ ಹಾಕಿಬಿಟ್ಟಿರಿ. ದಾಕ್ಷಿಣ್ಯವಿಲ್ಲದ ತುಂಬ ತಿಂದುಬಿಟ್ಟೆ. ಎಂದೆಂದಿಗೂ ಮರೆಯುವಂತಿಲ್ಲ, ಈ ರುಚಿಯನ್ನದ ನೆನಪು. ನಾನು ಹೋಗಿಬರುತೇನೆ, ಶಾರದಮ್ಮ" ಎಂದು ಹೇಳಿ ಸೀತಮ್ಮ ಹಿತ್ತಲ ಕಡೆಯಿಂದ ಅಂಗಳ ಸೇರಿದಳು.

ಸಂಜೆಯಾಯಿತು. ಮಕ್ಕಳಿಗೆ ಜಡೆ ಹಾಕಿ, ಹೂಗಿಡಗಳಿಗೆ ಒಂದೊಂದು ಕೊಡ ನೀರು ಹಾಕುವ ಹೊತ್ತಿಗೆ ಕತ್ತಲಾಯಿತು. ಅತ್ತೆ ಮಾವಂದಿರ ಹಾಸಿಗೆಗಳನ್ನು ಎಡಕೋಣೆಯಲ್ಲಿ ಹಾಸಿದಳು. ಒಂಬತ್ತು ಗಂಟೆಯೊಳಗಾಗಿ ಹುಡುಗರು ಮಲಗುವ ಪದ್ಧತಿ. ಆದುದರಿಂದ ಅವರ ಊಟ ಮುಗಿಯುವುದರೊಳಗಾಗಿ ಬಲಕೋಣೆಯಲ್ಲಿ ಮಕ್ಕಳ ಮತ್ತು ತಮ್ಮ ಹಾಸಿಗೆಗಳನ್ನು ಹಾಸಿ, ಅಡುಗೆಮನೆಯ ಕೆಲಸಕ್ಕೆ ಹೊರಟಳು. ಅತ್ತೆಮಾವಂದಿರ ಊಟ ಮುಗಿದಿತ್ತು. ಎಲ್ಲವನ್ನೂ ವೈಲಿಗೆಗೆ ಬಿಟ್ಟು, ಅತ್ತೆ ಮಲಗಲು ಹೊರಟಳು. ಮಾವ ಎಲೆಅಡಕೆ ಜಗಿಯುತ್ತ ನಡುಮನೆಯ ಮಂಹುದೀಪದ ಕೆಳಗೆ ಏನೇನೋ ಹರಟುತ್ತಿದ್ದರು. 'ಕಿಟ್ಟು ಏಕೊ ಇನ್ನೂ ಬರಲಿಲ್ಲವಲ್ಲ' ಎಂದು ಆಗಾಗ ಹೆಂಡತಿಯೊಡನೆ ಹೇಳುತ್ತಿದ್ದರು. 'ಬರುತಾನೆ, ಎಲ್ಲಿಗೆ ಹೋಗುತಾನೆ! ಎಲ್ಲೊ ತೀರ್ಥಪ್ಪನ ಅಂಗಡಿಯೊ, ಹಾಮಣ್ಣನ ಮನೆಯೊ ಹರಟೆಗೆ ಕರೆದಿರಬಹುದು. ಬರುತಾನೆ'—ಸೊಸೆ ಹಾಸಿದ್ದ ಹಾಸಿಗೆಯನ್ನು ಪುನಃ ಝಾಡಿಸುತ್ತ ಆಕೆ ಹೇಳಿದಳು.

ಸೀತಮ್ಮ, ಮುಸುರೆಯನ್ನೆಲ್ಲ ಹೊರಗೆ ಹಾಕಿ ಅಡುಗೆಮನೆ ಸಾರಿಸುವುದು, ಗುಡಿಸುವುದು ಎಲ್ಲ ಪೂರೈಸಿದಳು. ಗಂಟೆ ಹತ್ತು ಬಡಿಯಿತು. ಆದರೂ ಗಂಡ ಬರಲಿಲ್ಲ. ನೋಡಲು ಬೀದಿಯ ಬಾಗಿಲ ಕಡೆಗೆ ಹೊರಟಳು. ಅತ್ತೆ ಮಾವ ಮಲಗಿಬಿಟ್ಟಿದ್ದರು. ಮಕ್ಕಳಿಗೂ ನಿದ್ದೆ ಬಂದಿತ್ತು. ಬೀದಿಯ ಬಾಗಿಲನ್ನು ಓರೆಮಾಡಿ ನೋಡಿದಳು. ಅಮಾವಾಸ್ಯೆಯ ಹಿಂದಿನ ತ್ರಯೋದಶಿ. ಎದುರುಮನೆಯ ರಾಧಮ್ಮನವರ ಮನೆಯಲ್ಲಿಯೂ ಎಲ್ಲ ಮಲಗಿಬಿಟ್ಟಿದ್ದಾರೆ. ಶಾರದಮ್ಮನವರ ಮನೆಯಲ್ಲಿ ಸದ್ದೇ ಇಲ್ಲ. ಯಾರ ಮನೆಯಲ್ಲಿಯೂ ದೀಪವಿಲ್ಲ. ಎಲ್ಲ ಮಲಗಿದ್ದಾರೆ!

ಈ ಕಗ್ಗತ್ತಲು ನೋಡಿದೊಡನೆಯೆ 'ಅವರು ಇನ್ನೂ ಬರಲಿಲ್ಲವಲ್ಲ' ಎಂಬ ಯೋಚನೆ ಮತ್ತೆ ಮತ್ತೆ ತಟ್ಟಿತು. ಸ್ವಲ್ಪ ಹೊತ್ತು ಜಗಲಿಯ ಮೇಲೆ ಸುಮ್ಮನೆ ಕುಳಿತು ನೋಡಿದಳು. 'ಪಾತ್ರೆ ತೊಳೆಯುವ ಹೊತ್ತಿಗೆ ಬರಬಹುದು' ಎಂದುಕೊಂಡು ಬೀದಿಯಬಾಗಿಲನ್ನು ಮುಂದಕ್ಕೆ ಹಾಕಿ ಒಳಗೆ ಹೋದಳು.

ಎಲ್ಲ ಕೆಲಸಗಳೂ ಪೂರೈಸಿದುವು. ಅವರು ಬಾರದ ಹೊರತು ಸೀತಮ್ಮನಿಗೆ ನಿದ್ದೆ ಬರುವಂತಿಲ್ಲ. ಹುಡುಕಿಕೊಂಡು ಯಾವುದಾದರೂ ಕೆಲಸ ಮಾಡೋಣ ಎನ್ನಿಸಿತು. ಮಕ್ಕಳು ಮುಡಿದಿದ್ದ ಮೊಗ್ಗಿನ ದಂಡೆಗಳು ಗೋಡೆಯ ಅಂಚಿನಲ್ಲಿ ಬಿದ್ದಿದ್ದುವು. ತುಳಸಿಗಿಡದೊಳಗಿಟ್ಟರೆ ಚೆನ್ನಾಗಿ ಅರಳುತ್ತವೆ, ಎಂದುಕೊಂಡು ಅವುಗಳನ್ನು ತುಳಸಿಕಟ್ಟೆಯೊಳಗಿಟ್ಟು ಬಂದಳು. ಗಂಟೆ ಹನ್ನೊಂದಾಯಿತು. ಇನ್ನೇನು ಮಾಡಿಯಾಳು. ಬೀದಿಯ ಬಾಗಿಲು ತೆರೆದು, ಮತ್ತೊಮ್ಮೆ ಜಗಲಿಯಮೇಲೆ ಸುಮ್ಮನೆ ಕುಳಿತಳು. ಕುಳಿತು ಸಾಕಾಯಿತು. ಬಾಗಿಲನ್ನು ಮುಂದಕ್ಕೆ ಹಾಕಿ, ದೀಪ ಸಣ್ಣದು ಮಾಡಿ ಹಾಸಿಗೆಯ ಮೇಲೆ ಸುಮ್ಮನೆ ಮಲಗಿಕೊಂಡಳು.

ಗಡಿಯಾರ ಹನ್ನೆರಡು ಹೊಡೆಯಿತು. ಇನ್ನೂ ಗಂಡನ ಸುಳಿವಿಲ್ಲ. ಸೀತಮ್ಮ ಸುಮ್ಮನೆ ಹಾಸಿಗೆಯ ಮೇಲೆ ಹೊರಳಾಡುತ್ತಿದ್ದಳು. ಕೆಲಸವಿಲ್ಲದಿದ್ದರೆ, ಏನೇನೋ ಚಿಂತೆ. ತವರನ್ನು ನೆನಸಿಕೊಂಡಳು; ಚಿಕ್ಕ ತಕ್ಕಡಿ ತಮ್ಮನ ಜ್ಞಾಪಕ ಬಂತು; ಹೆತ್ತತಾಯಿಯ ನೆನಪು ಬಂತು. ನಿಟ್ಟುಸಿರುಬಿಟ್ಟಳು. ಅಪ್ಪನ ಅವಿವೇಕ ನೆನಸಿಕೊಂಡಾಗ ತುಂಬ ಸಿಟ್ಟು ಬಂದಿತು. ಅತ್ತೆಯ ಮನೆಯ ಈ ದುಃಖದ ಹೊರೆಯ ಜೊತೆಗೆ ಹೊರಲಾರದ ತವರು ಹೊರೆ ಬೇರೆ. ಅದನ್ನೆಲ್ಲ ನೆನಸಿಕೊಂಡರೆ ಬಲು ಸಂಕಟವಾಗುತ್ತದೆ ಎಂದುಕೊಂಡು ಸುಮ್ಮನೆ ಕಣ್ಣುಮುಚ್ಚಿ ಮಲಗಿದಳು. ಆದರೂ ನಿದ್ದೆ ಬರಬೇಕಲ್ಲ! ನಿದ್ದೆ ಬಾರದಿದ್ದರೆ ಮನಸ್ಸು ಸುಮ್ಮನೆ ಕೂಡುವುದಿಲ್ಲ; ಏನೇನೋ ಚಿತ್ರ ಬರೆಯುತ್ತದೆ; ನಡೆದ ಕತೆ, ನಡೆಯದ ಕತೆ, ನಡೆಯುವ ಕತೆ ಎಲ್ಲವನ್ನೂ ಬರೆಯಬಲ್ಲುದು.

ಒಂದು ಗಂಟೆಯ ಮೇಲಾಯಿತು. ಬೀದಿಯ ಬಾಗಿಲು ತೆರೆದ ಸದ್ದಾಯಿತು. ತಟ್ಟನೆ ಸೀತಮ್ಮ ಎದ್ದು ಪಡಸಾಲೆಗೆ ಬಂದು ನೋಡಿದಾಗ 'ಅಯ್ಯೊ, ಥೂ ಬೆಕ್ಕು. ಸುಡುಗಾಡು' ಎಂದುಕೊಂಡಳು. ಅದು

ಒಳಗೆ ತಲೆ ಹಾಕಿ, ಪ್ರವೇಶಿಸಲು ಮಹಾಪ್ರಯತ್ನ ನಡಸುತ್ತಿತ್ತು. ಬೆಕ್ಕನ್ನೋಡಿಸಿ ಬಾಗಿಲನ್ನು ಪುನಃ ಮುಂದಕ್ಕೆ ಹಾಕಿ ಕೋಣೆಗೆ ಬಂದಳು. ಮತ್ತೆ ಬಾಗಿಲು ಸದ್ದಾಯಿತು. ನಡುಮನೆಗೆ ಬಂದು ನೋಡಿದಳು. ತನ್ನ ಗಂಡ ತೆರೆದ ಬಾಗಿಲನ್ನು ಮುಚ್ಚುತ್ತಿದ್ದ.

'ಇದೇನು ಇಷ್ಟು ಹೊತ್ತು ?' ಎಂದು ಕೇಳುತ್ತ ಕೋಣೆಯಲ್ಲಿದ್ದ ದೀಪ ತೆಗೆದುಕೊಂಡು ಬಂದಳು. ಗಂಡ ಅಂಗಿ ಬಿಚ್ಚಿ ಕಾಲು ತೊಳೆದುಕೊಂಡ ಮೇಲೆ ಅಡುಗೆಮನೆಗೆ ಕರೆದುಕೊಂಡು ಹೋದಳು. ಎಲೆ ಹಾಕಿ ಸಿದ್ಧಪಡಿಸಿತ್ತು. ಹೆಂಡತಿ ಬಡಿಸಿದಳು. ಗಂಡ ಊಟ ಮಾಡುತ್ತ,

"ನೀನು ಊಟ ಮಾಡಿದೆಯಾ ?"

"ಇಲ್ಲ"

"ಏಕೆ ?"

"ಹಸಿವಿಲ್ಲ"

"ಬೆಳಗ್ಗೆ ?"

"ಇಲ್ಲ"

"ಯಾರಾದರೂ ನಕ್ಕಾರು ! ನಿನ್ನೆ ರಾತ್ರಿ ಊಟಮಾಡಿದವಳಿಗೆ ಇನ್ನೂ ಹಸಿವೆಯಾಗಿಲ್ಲವೆ ?"

"ಇಲ್ಲ. ಶಾರದಮ್ಮನವರು ಮಧ್ಯಾಹ್ನ ಹೊಟ್ಟೆತುಂಬ ಹುಳಿಯನ್ನ ಕೈತುತ್ತು ಹಾಕಿದರು ; ಅದು ಇನ್ನೂ ಅರಗಿಲ್ಲ. ನನಗೆ ನಿಜವಾಗಿಯೂ ಹಸಿವೆಯಾಗಿಲ್ಲ."

"ನಾನೂ ಕೈತುತ್ತು ಹಾಕುತೇನೆ. ಒಂದೆರಡು ತುತ್ತು ತಿನ್ನು"

"............ನಿಮ್ಮ ಇಷ್ಟ"

ಕಿಟ್ಟು ಕೈತುತ್ತು ಹಾಕಿದ. ಸೀತಮ್ಮನಿಗೆ ರಸನಿಮಿಷ ತೋರಿದಂತಾಯಿತು ; ತುಂಬ ಆನಂದವಾಯಿತು. ದುಃಖದ ನೋವು ದೂರ ಓಡಿತು.

"ಬೆಳಗ್ಗೆ ಊಟ ಮಾಡಲಿಲ್ಲವೆ ?"

"ಇಲ್ಲ"

"ಕಾರಣ ?"

"ಹಾಕಲಿಲ್ಲ"

ಕಿಟ್ಟು ಮಾತಾಡಲಿಲ್ಲ. ಹೆಂಡತಿಯೊಡನೆ ಹೆಚ್ಚು ಮಾತಾಡುವುದೊಂದು ಕಷ್ಟದ ಕೆಲಸ. ಅದರಲ್ಲಿಯೂ ತನ್ನ ಅಪ್ಪ ಅಮ್ಮ ನಡಸಿದ ದಂಡನೆಯ ಪ್ರಸ್ತಾಪ ಬಂದರೆ ಕಿಟ್ಟು ಮೂಕನಾಗಿಬಿಡುತ್ತಾನೆ. ತಂದೆ ತಾಯಿಗಳ ಅನಂತವಿಧೇಯ ಪುತ್ರ.

ಊಟ ಮುಗಿಯಿತು. ಎಲೆಅಡಕೆ ಮಡಿಸಿಕೊಟ್ಟಳು. ದೀಪದ ಬೆಳಕಿನಲ್ಲಿ ಮೊಳಕ್ಕೆ ಮೇಲಿದ್ದ ಕೋಲುಪೆಟ್ಟಿನ ಬಾಸುಂಡೆ ಜೀವನಕಣ್ಣಿಗೆ ಚೆನ್ನಾಗಿ ಕಾಣಿಸಿತು. ಗಲ್ಲ ಕೆಂಪು ಪಟ್ಟೆಗಳೊಡನೆ ದಪ್ಪನಾಗಿದ್ದುದನ್ನು ಕಂಡ. ಕಿವಿಯ ಓಲೆ ಜೋತುಬಿದ್ದು ರಕ್ತ ಕಟ್ಟಿದ್ದುದನ್ನು ನೋಡಿದ. ಹೇಳದೆ ಕೇಳದೆ ಅವನ ಬಾಯಿಂದ ಒಂದು ನಿಟ್ಟುಸಿರು ಬಂತು. ಸುಮ್ಮನೆ ಹಾಸಿಗೆಯ ಮೇಲೆ ಮಲಗಿಬಿಟ್ಟ.

ಅಡುಗೆಮನೆಯ ಕೆಲಸ ತೀರಿಸಿಕೊಂಡು ಸೀತಮ್ಮ ಕೋಣೆಗೆ ಬಂದಳು. ಮಲಗಿದ್ದ ಗಂಡನ ಮುಖ ನೋಡಿದಳು. ನಿದ್ದೆ ಬಂದಿತ್ತು. ಆದರೆ ಕಣ್ಣಕೊನೆಯಲ್ಲಿ ನೀರುಗೂಡಿತ್ತು. ದೀಪ ಸಣ್ಣದು ಮಾಡಿದಳು.

## ೩

ರಾಧಮ್ಮನವರ ಯಜಮಾನರು ಊರಲ್ಲಿರಲಿಲ್ಲ. ಬೇಗ ಊಟವಾಯಿತು. ವಚನರಾಮಾಯಣ ಓದುತ್ತ ಕುಳಿತಿದ್ದರು. ಪಕ್ಕದ ಮನೆಯ ಸರೋಜಮ್ಮ, ಕೊನೆಯಮನೆ ಕಾವೇರಮ್ಮ ಬಂದರು. ಸ್ವಲ್ಪ ಹೊತ್ತಿನೊಳಗಾಗಿ ಹತ್ತು ಹನ್ನೆರಡು ಜನ ಹೆಂಗಸರು ಸೇರಿದರು. ರಾಧಮ್ಮನವರು ರಾಮಾಯಣ ಚೆನ್ನಾಗಿ ಓದುತ್ತಾರೆ; ವಿವರಿಸಿ ಹೇಳುತ್ತಾರೆ. ಸೀತಮ್ಮನಿಗೂ ರಾಮಾಯಣ ಕೇಳಬೇಕೆಂಬ ಆಸೆ. ತನಗೆ ಓದು ಬಾರದು ರಾಧಮ್ಮನವರ ಮನೆ ದೂರವಿಲ್ಲ; ಎದುರು ಮನೆ. ಆದರೂ ಅತ್ತೆಯ ಅಡಚಣೆಯಿಂದ ರಾಮಾಯಣ ಕೇಳುವ ಸುಯೋಗ ಸೊಸೆಗೆ ಸಿಕ್ಕಿರಲಿಲ್ಲ. ರಾಧಮ್ಮನವರು ರಾಮ ಕಾಡಿಗೆ ಹೊರಟ ಅಧ್ಯಾಯಕ್ಕೆ ಬಂದರು. ಆ ಹೊತ್ತಿಗೆ ಸರಿಯಾಗಿ ಎಂದೂ ಬಾರದ ಹರಟೆಮಲ್ಲಿ ಪದ್ದಕ್ಕ ಬಂದಳು.

ಹತ್ತಿ ಬಿಡಿಸುತ್ತಿದ್ದ ಸರೋಜಮ್ಮನವರು "ಬಂದಳಪ್ಪಾ ಬಂದಳು! ಇನ್ನು ಪದ್ದಕ್ಕನ ರಾಮಾಯಣ ಶುರು. ಇಲ್ಲಿಗೆ ಯಾಕೆ ಬಂದೆ ಪದ್ದಕ್ಕ, ಈವಾಗ? ಹತ್ತಿ ಬೇಕಾಗಿದ್ದರೆ ಹೇಳು. ಒಂದು ಹಿಡಿ ಕೊಟ್ಟುಬಿಡು

ತೀನೆ. ಮೊದಲು ಇಲ್ಲಿಂದ ಹೊರಟುಬಿಡು. ಬಾಯಿಬಿಚ್ಚಬೇಡ" ಎಂದರು. "ಓಹೊಹೊಹೋ, ದೇವರು ವರ ಕೊಟ್ಟರೂ ಪೂಜಾರಿ ಕೊಡಾಂತ. ಮನೆ ಮಾಲೀಕರು --ರಾಧಮ್ಮನವರು ಮೂಗು ಮುಚ್ಚಿ ಕೊಂಡು ಕುಳಿತಿರುವಾಗ ಸರೋಜಮ್ಮನವರ ಕೂಗಾಟ ನೋಡಿದೆಯಾ! ನಾನೇನು ಕೇಳಬಾರದೇನು ರಾಮಾಯಣ? ಎಲ್ಲ ನೀವೆ ಕೇಳಿ ಸ್ವರ್ಗಕ್ಕೆ ಹೋಗಬೇಕೇನೊ. ಅದಿರಲಿ. ಸೂರಪ್ಪನವರ ಮನೆಗೆ ಹಳ್ಳಿಯ ಗಾಡಿ ಬಂದಿದೆಯಲ್ಲ? ಏನು, ಸೊಸೆಯನ್ನ ಊರಿಗೆ ಕಳಿಸುತಾರೊ, ಏನೊ" ಎನ್ನುತ್ತ ಹೊಲಿಗೆಗೆ ತಂದಿದ್ದ ದಾರದುಂಡೆ, ಕುಪ್ಪಸದ ಬಟ್ಟೆಯನ್ನು ನೆಲದಮೇಲೆ ಹಾಕಿಕೊಂಡು ಪದ್ದಕ್ಕ ಕುಳಿತುಬಿಟ್ಟಳು.

ಸರೋಜಮ್ಮ "ಸರಿ. ಇನ್ನು ರಾಮಾಯಣ ಮುಗಿದಹಾಗೆಯೆ. ಪದ್ದಕ್ಕ ಷುರು ಮಾಡಿದಳಲ್ಲ!" ಎಂದ ಕೂಡಲೆ ಪದ್ದಕ್ಕ "ಯಾಕ್ರೀ ನಾನೇನು ಹೇಳಿದೆ? ಎಲ್ಲರ ಮನೆಯದೂ ಒಂದೊಂದು ರಾಮಾಯ ಣಾನೇ! ಸೂರಪ್ಪನವರ ಮನೆಯದೊಂದು ರಾಮಾಯಣ. ನಮ್ಮ ಮನೆಯದೊಂದು ರಾಮಾಯಣ. ನಿಮ್ಮ ಮನೆಯದೊಂದು ರಾಮಾಯಣ. ರಾಧಮ್ಮನವರು ಓದುವುದು ದಶರಥನ ಮನೆಯ ರಾಮಾಯಣ, ಅಷ್ಟೆ" ಎಂದಳು.

"ಸರಿಯಮ್ಮ. ನಿನ್ನ ಹತ್ತಿರ ಯಾರು ಮಾತಾಡುವರು. ಹ್ಞೂ, ಓದಿರಿ ರಾಧಮ್ಮನವರೆ" ಸರೋಜಮ್ಮ ಹೇಳಿದಳು.

ರಾಧಮ್ಮ ಪುಸ್ತಕವನ್ನು ಅರೆಮುಚ್ಚಿ "ಗಾಡಿ ನಿಂತಿದೆಯೆ ಪದ್ದಕ್ಕ, ಹಾಗಾದರೆ? ಕಳಿಸುತಾರೊ, ಏನೊ .......... ಓದುವುದು ಸಾಕು, ಸರೋಜಮ್ಮ. ರಾಮದೇವರನ್ನು ಕಾಡಿಗೆ ಕಳಿಸಿ ನಡುವೆ ನಿಲ್ಲಿಸ ಬೇಕಾಗುತದೆ. ಅದೂ ಅಲ್ಲದೆ ಪಾಪ! ಆ ಹುಡುಗಿ ಊರಿಗೆ ಹೊರಡು ತಾಳೆ. ನಿನ್ನೆ ಬೆಳಗ್ಗೆ, ಅಯ್ಯೊ, ಬಹಳ ಹೊಡೆಯುತಿದ್ದರು. ನನಗೆ ತುಂಬ ದುಃಖವಾಯಿತು. ಸದ್ಯ, ಕೆಲವು ದಿನ ತವರೂರಿನಲ್ಲಾದರೂ ಸುಖವಾಗಿರಲಿ" ಎಂದರು.

ಸೀತಮ್ಮನ ಮನೆಯ ಪಕ್ಕದ ಶಾರದಮ್ಮನವರು "ಅಳಿಯಲ್ಲ ಮಗಳ ಗಂಡ! ತವರು ಮನೆಯೂ ಅತ್ತೆ ಮನೆಯೂ ಒಂದೆ. ಅಲ್ಲಿ ಮಲತಾಯಿ ಅತ್ತೆಯಾಗಿದಾಳೆ, ಅಷ್ಟೆ. ಈಗ ಒಂದು ತಿಂಗಳ ಹಿಂದೆ ಒಂದು ದಿನ ಅವಳ ಮಾವ ಮಡಿಕೋಲಿನಿಂದ ಹೊಡೆದಿದ್ದರು. ಪೈ

ತುಂಬ ಕರಿನಾಗರ ಸುತ್ತಿದ ಹಾಗೆ ಬಾಸುಂಡೆಗಳು. ಕಿವಿಯ ಓಲೆ ಜಗ್ಗಿ ರಕ್ತ ಕಟ್ಟಿತ್ತು. ಕೆನ್ನೆಗಳೆರಡೂ ಮುದುಕನ ಕೈವುಗುರಿಗೆ ಸಿಕ್ಕಿ ಊದಿ ಬಿಟ್ಟಿದ್ದುವು. ಸಂಜೆಯವರೆಗೂ ಅನ್ನ ಹಾಕಿರಲಿಲ್ಲ. ಸಿಟ್ಟುಮಾಡಿಕೊಂಡು ಊಟ ಬಿಡುವ ಹುಡುಗಿ ಅವಳಲ್ಲ. ಅವರೇ ಅವಳಿಗೆ ಅನ್ನ ಹಾಕುವು ದಿಲ್ಲ. ಜಗಳ ನಡೆದ ದಿನ ರಾತ್ರಿಯಂತೂ ಮಗನಿಗೆ ಎಷ್ಟು ಬೇಕೊ ಅಷ್ಟು ಅನ್ನ ಸಾರು ಮುಚ್ಚಿಟ್ಟು ಉಳಿದುದನ್ನು ಕಲಗಚ್ಚಿಗೆ ಸುರಿಯುತಾಳೆ ಆ ಅತ್ತೆ. ಪಾಪ, ಅವೊತ್ತು ಹುಣಸೆಹಣ್ಣು ಸಾಲಕ್ಕೆ ಬಂದಿದ್ದಳು. ಹುಳಿಯನ್ನ ಕಲಸಿ ಕೈತುತ್ತು ಹಾಕಿದೆ. ಬಸಿರು ಹೆಂಗಸು ಬಯಕೆ. ಪಾಪ, ಸಂತೋಷದಿಂದ ಊಟಮಾಡಿದಳು ಅವಳಿಗೆ ತವರಿನಲ್ಲೇನೂ ಸುಖವಿಲ್ಲ" ಎಂದು ಹೇಳಿದರು.

ಪದ್ದಕ್ಕ "ಸೊಸೆ ಗಟ್ಟಿಗಳಾದರೆ ಎಂಥ ಅತ್ತೆ ಮಾವಂದಿರನ್ನಾದರೂ ಬಗ್ಗಿಸಬಹುದು. ನಮ್ಮ ಮಾವ ತುಂಬ ಸಿಡುಕರು. ವಯಸ್ಸಾಗಿತ್ತು. ವರುಷ ಕಳೆದಂತೆಲ್ಲ ಸಿಟ್ಟು ಏರುತಿತ್ತು. ನಾನು ನಮ್ಮತ್ತೆಯ ಮನೆಗೆ ಬಂದಾಗ ಮಾತ್ರ ಎಲ್ಲರೂ ಒಟ್ಟಿಗೆ ಇದ್ದೆವು. ಆಗ ಒಂದು ವರುಷ, ಹೊಸದರಲ್ಲಿ ನನ್ನನ್ನು ಬಲು ಗೋಳಿಗೀಡುಮಾಡಿದರು. ನಾನು ಎಲ್ಲ ವಿಷಯವನ್ನೂ ನಮ್ಮವರಿಗೆ ಹೇಳಿ ಅವರ ಮೇಲೆ ಸಿಟ್ಟುಮಾಡುತಿದ್ದೆ. ದೇವರ ದಯೆಯಿಂದ ಅವರಿಗೆ ಬೆಂಗಳೂರಿಗೆ ವರ್ಗವಾಯಿತು. ನಾವಿ ಬ್ಬರೇ ಬೆಂಗಳೂರಿನಲ್ಲಿ ಸಂಸಾರ ಹೂಡಿದೆವು. ಆದರೂ ನಮ್ಮ ಮಾವ ಆಗಾಗ ಬೆಂಗಳೂರಿಗೆ ಬಂದು ನನ್ನನ್ನು ಹುರಿದು ಮುಕ್ಕುತಿದ್ದರು. ಬೆಳಗ್ಗೆ ಎದ್ದ ಕೂಡಲೆ ಭಗವದ್ಗೀತೆ ಓದಲು ಶುರು ಮಾಡಿದವರು ಮಧ್ಯಾಹ್ನ ಎರಡು ಗಂಟೆಯಾದರೂ ಪೂರೈಸುತಿರಲಿಲ್ಲ. ಅವರು ಹನ್ನೊಂದು ಗಂಟೆಗೆ ಆಫೀಸಿಗೆ ಹೊರಡಬೇಕು. ಅಷ್ಟುಹೊತ್ತಿಗೆ ನಾನು ಅಡುಗೆ ಮಾಡುತಿದ್ದೆ. ಭಗವದ್ಗೀತೆ ಓದಿ ಮುಗಿಸಿದ ಮೇಲೆ, ಸ್ನಾನ ಮಾಡಿ ಈ ಮುದುಕ ಊಟಕ್ಕೆ ಬರುತಿತ್ತು. ಮುದುಕನ ಊಟವಾದ ಮೇಲೆ ನಾನು ಮಾಡಬೇಕು. ಒಂದೊಂದು ದಿನ ಮುಂಚೆಯೆ ಊಟ ಮಾಡಿಬಿಡುತಿದ್ದೆ. ಆಗ ಮುದುಕ ಮೂರು ಲೋಕ ಕೇಳುವಹಾಗೆ ಕೂಗಾಡುತಿತ್ತು. ಎರಡು ಗಂಟೆಯವರೆಗೂ ನೀರೊಲೆಯ ಉರಿ ಇರ ಬೇಕು. ಒಂದಕ್ಕೆರಡು ಖರ್ಚು. ಉರಿ ತೆಗೆದರೆ 'ತಣ್ಣೀರು ಸ್ನಾನ ಮಾಡಬೇಕೇನು?' ಎಂದು ಅರಚುತಿತ್ತು. ಕಣ್ಣು ಬೇರೆ ಸರಿಯಾಗಿ

ಕಾಣಿಸುತಿರಲಿಲ್ಲ. ಎರಡು ಗಂಟೆಯ ಮೇಲೆ ನಾನು ಅನ್ನ ಹಾಕಿದರೆ 'ಅನ್ನ ಆರಿಸಿಬಿಟ್ಟಿದೀಯೆ; ಸಾರಿಗೆ ಉಪ್ಪು ಹಾಕಿಲ್ಲ; ನೀರು ಬೆರಸಿದೀಯೆ; ಕಲ್ಲು ಸೇರಿಸಿದೀಯೆ' ಎಂದು ಏನೇನೊ ಹೇಳುತಿದ್ದರು. ನನಗೆ ಬಲು ಸಿಟ್ಟು ಬರುತಿತ್ತು. ನಾನೂ ರೇಗಿಬಿಡುತಿದ್ದೆ. ನಮ್ಮ ಯಜಮಾನರ ಮೇಲೂ ರೇಗಿಬಿಡುತಿದ್ದೆ. 'ಈ ಮುದುಕನನ್ನು ಊರಿಗೆ ಕಳಿಸಿ. ಇಲ್ಲದಿದ್ದರೆ ನನ್ನನ್ನು ತವರು ಮನೆಗೆ ಕಳಿಸಿ' ಎಂದು ಹೇಳಿಬಿಟ್ಟೆ. ನಮ್ಮ ಯಜಮಾನರು ನನಗೆ ಸ್ವಲ್ಪ ಹೆದರುತಾರೆ. ಆದುದರಿಂದ ಮಾವನವರನ್ನೇ ಊರಿಗೆ ಕಳಿಸಿಬಿಟ್ಟರು. ಇಷ್ಟು ದಿನವಾಯಿತು, 'ನಾನು ಒಂದು ವರುಷಕ್ಕಿಂತ ಹೆಚ್ಚಾಗಿ ಅತ್ತೆಯ ಮನೆಯಲ್ಲಿ ಇಲ್ಲವೇ ಇಲ್ಲ" ಎಂದಳು.

ಕಾವೇರಮ್ಮ "ನಾದಿನಿ ಇದ್ದಿದ್ದರೆ ಸೀತಮ್ಮನಿಗೆ ಇನ್ನೂ ತೊಂದರೆ ಆಗುತಿತ್ತು. ಹದಿನೆಂಟುಇಪ್ಪತ್ತು ವರುಷ ಆಗಿದ್ದರೂ ಮದುವೆಯಾಗದೆ, ಮುಳ್ಳಿನ ಹಾಗೆ ಮನೆಯಲ್ಲಿ ಕುಳಿತಿರುತಾರೆ. ನಮ್ಮಂಥ ಮೂಕಸೊಸೆಗಳು ಅವರ ಮನೆ ಸೇರಿದರೆ ಅವರಿಗೆ ಪರಮಾನಂದ. ಅದರಲ್ಲಿಯೂ ಅವರವರ ಅತ್ತೆಯ ಮನೆಯಿಂದ ಮೂರು ನಾಲ್ಕು ಜನ ಅತ್ತಿಗೆ ನಾದಿನಿಯರು ಬಂದುಬಿಡಬೇಕು! ಆಗ ಆ ಗಂಡು ಮಗನ ಹೆಂಡತಿ ಬಾವಿ ಹುಡುಕಬೇಕಾಗುತದೆ. ನನ್ನ ಮಕ್ಕಳಿಗೆ ಹಾಗೆ ಮಾಡಿದೆ; ನಿನ್ನ ಮಕ್ಕಳಿಗೆ ಹೀಗೆ ಮಾಡಿದೆ. ಈ ಕೆಲಸ ಮಾಡಲಿಲ್ಲ, ಆ ಕೆಲಸ ಕೆಡಿಸಿದೆ—ಇದೇ ಅವರ ಪ್ರತಿದಿನದ ಮಾತು. ಬಹಳ ಬೇಸರ ಬಂದುಬಿಡುತದೆ. ಮಕ್ಕಳ ಸಲುವಾಗಿ ಮಾರಾಮಾರಿ ಷುರುವಾಗಿಬಿಡುತದೆ. ಅತ್ತೆಮಾವಂದಿರು ಯಾವಾಗಲೂ ಹೆಣ್ಣುಮಕ್ಕಳ ಕಡೆಯೇ ಇರುತಾರೆ. ಮುಖ್ಯವಾಗಿ ಎಲ್ಲವೂ ಅವರವರ ಪೂರ್ವಜನ್ಮದ ಕರ್ಮ, ಅಷ್ಟೆ" ಎಂದರು.

"ಗಂಡ ಸರಿಯಾದವನಾದರೆ ಅತ್ತಿಗೆಯ ಆಟವೂ ನಡೆಯುವುದಿಲ್ಲ. ನಾದಿನಿಯ ಕಾಟವೂ ನಡೆಯುವುದಿಲ್ಲ. ನನ್ನ ತಂಗಿಯ ಗಂಡ ಮೈಸೂರಿನಲ್ಲಿ ಡಾಕ್ಟರಾಗಿದಾರೆ. ಅಪ್ಪ ಎಂ.ಬಿ.ಬಿ.ಎಸ್. ಓದಿಸಿ ಔಷಧಿ ಅಂಗಡಿ ಇಡಲು ಹಣ ಸಹ ಕೊಟ್ಟರು. ಆದರೆ ಅವರಿಗೆ ಮನೆ ತುಂಬ ಹೆಣ್ಣು ಮಕ್ಕಳು. ಅವರಿಗೆಲ್ಲ ಮದುವೆಯಾಗಿತ್ತು. ಆದರೂ ಅವರೆಲ್ಲ ತಂದೆಯ ಮನೆಯಲ್ಲಿಯೇ ಇರುತಾ ನನ್ನ ತಂಗಿಯನ್ನು ಹುರಿದು

ಮುಕ್ಕುತಿದ್ದರು. ಅವಳೂ ನನ್ನಂತೆಯೇ ಗಟ್ಟಿಗಿತ್ತಿ. ಗಂಡನೆದುರಿಗೆ ಸಾವಿರ ಸಲ ಎಲ್ಲ ವಿಷಯಗಳನ್ನೂ ತಿಳಿಸಿದಳು. ಆತನಿಗೂ ಬಹಳ ಬೇಸರವಾಯಿತು. ಸಿಟ್ಟುಗೊಂಡು, ಅಪ್ಪ ಅಮ್ಮನ ಸಂಗಡ ಜಗಳ ಆಡೇಬಿಟ್ಟರು. ಪಕ್ಕದ ಜಾಗ ತಮ್ಮ ಹೆಸರಿಗೆ ಬರಸಿಕೊಂಡು, ಬೇರೆ ಮನೆ ಕಟ್ಟಿಕೊಂಡು ಸುಖವಾಗಿದಾರೆ. ಇಷ್ಟು ದಿನಗಳಾಯಿತು, ಇನ್ನೂ ತಂದೆ ಮಗನಿಗೆ ಮಾತಿಲ್ಲ; ತಂದೆಯ ಮನೆಗೆ ಊಟಕ್ಕೆ ಕೂಡ ಹೋಗು ವುದಿಲ್ಲ. ನೀವು ಅದನ್ನು ತಪ್ಪು, ಎನ್ನಬಹುದು. ಆದರೆ ತಂದೆಗೆ ಹೆಣ್ಣು ಮಕ್ಕಳೇ ಹೆಚ್ಚಾದರೆ ಗಂಡುಮಗ ಸುಮ್ಮನಿರುತಾನೇನ್ರಿ? ಸೀತಮ್ಮ ಬಹಳ ಮೆತ್ತನೆಯ ಮನಸ್ಸಿನವಳು. ಅವಳಿಗೆ ಧೈರ್ಯ ಹೇಳುವವರಿಲ್ಲ. ನನ್ನಂಥವಳಾಗಿರಬೇಕಾಗಿತ್ತು; ಆ ಮುದುಕ ಮುದುಕಿಯರನ್ನು ಗಾಳಿ ಪಟ ಆಡಿಬಿಡುತಿದ್ದೆ" ಪದ್ದಕ್ಕ ನುಡಿದಳು.

ಹೂಬತ್ತಿ ಹೊಸೆಯುತಿದ್ದ ರಾಜಿಬಾಯಿ "ಪದ್ದಕ್ಕ, ಸೊಸೆ ಸ್ವಲ್ಪ ಗಟ್ಟಿಗಳಾಗಿದ್ದರೆ, ನುಂಗಿ ಬಿಡಲು ಅತ್ತೆಯವರೆಲ್ಲ ಬಾಳೆಯ ಹಣ್ಣಿನ ಹಾಗಿರುವುದಿಲ್ಲ. ಅವರೂ ಸೊಸೆಯ ಅವಧಿಯನ್ನು ಪೂರೈಸಿ ಅತ್ತೆಯ ಅಂತಸ್ತಿಗೆ ಬಂದಿರುತ್ತಾರೆ. ಗಟ್ಟಿಗಿತ್ತಿ ಸೊಸೆ ಇದ್ದರೆ, ಗಟ್ಟಿಗಿತ್ತಿ ಅತ್ತೆಯೂ ಇರುವುದುಂಟು. ನನ್ನ ಮಗಳು ಅಂಥ ಅತ್ತೆಯ ಕಾಟದಲ್ಲಿ ಎಷ್ಟು ಕಷ್ಟಪಟ್ಟಳು. ಮದುವೆಯಲ್ಲಿ ಹಾಕಿದ್ದ ಒಂದು ಒಡವೆಯನ್ನೂ ಬಿಡದೆ, ದೊಡ್ಡ ದೊಡ್ಡ ಸೀರೆಗಳನ್ನು ಸಹ ತನ್ನದೊಂದು ಕತ್ತಲು ಕೋಣೆಯಲ್ಲಿಟ್ಟು, ಬೀಗ ಹಾಕಿ ಮೊಹರು ಮಾಡಿದ್ದಳು. ಆ ಗುಹೆಯಲ್ಲಿ ಯಾರಯಾರ ಮನೆಯ ಒಡವೆವಸ್ತುಗಳೋ ತುಂಬಿದ್ದುವು. ಎಲ್ಲವೂ ಆಕೆಯ ಲೇವಾದೇವಿಗೆ ಸೇರಿದ್ದು. ದಿನಕ್ಕೆ ಮೂರು ನಾಲ್ಕು ಬಾರಿ ಬುಡ್ಡಿ ಹಚ್ಚಿಕೊಂಡು ಕೋಣೆ ಶೋಧಿಸಿ ಬರುತಿದ್ದಳು. ಎಲ್ಲರೂ ಮಲಗಿದ ಮೇಲೆ ದೇವರ ದೀಪದ ಬೆಳಕಿನಲ್ಲಿ ದುಡ್ಡು ಎಣಿಸುವುದು. ಇಂಥ ಜಿಪುಣೆ, ನನ್ನ ಮಗಳನ್ನು ಜಿಗಣೆ ಹೀರಿದ ಹಾಗೆ ಹಿಂಡಿದಳು. ಮಗನ ಜೇಬಿನಿಂದ ದುಡ್ಡು ಕದ್ದು ಸೊಸೆಯ ಸೆರಗಿಗೆ ಕಟ್ಟಿಬಿಡುತಿದ್ದಳು. ಹಾಗೆ ಒಂದೆರಡು ಬಾರಿ ಮಾಡಿ, ಸೊಸೆಯೇ ಕಳ್ಳಿ, ಎಂದು ಮಗನಿಗೆ ತೋರಿಸುವುದು; ಆಮೇಲೆ ಆಗಾಗ ತಾನೇ ದುಡ್ಡು ಕದ್ದು, ತನ್ನ ಚೀಲಕ್ಕೆ ಭರ್ತಿ ಮಾಡುವುದು. ಮನೆಯಲ್ಲಿದ್ದ ಕಾಫೀಪುಡಿ, ಸಕ್ಕರೆ, ತೆಂಗಿನಕಾಯಿಗಳನ್ನು ಸಹ ಮಾರಿಬಿಡುತಿದ್ದಳು. ಎಲ್ಲ ತಪ್ಪೂ

ಸೊಸೆಯ ಮೇಲೆ. ಮಗ ನಂಬಿ, ಕೊನೆಗೆ ನನ್ನ ಮಗಳನ್ನು ... ... ಬಿಟ್ಟು ಬಿಟ್ಟ. ಆದರೆ ದೇವರು ಅವಳಿಗೆ ದಾರಿ ಹಾಕಿಕೊಟ್ಟಿದ್ದ. ಲೋಯರ್ ಸೆಕೆಂಡರಿ ಪರೀಕ್ಷೆಯಾಗಿತ್ತು. ಒಂದು ಉಪಾಧ್ಯಾಯಿನಿಯ ಕೆಲಸ ಸಿಕ್ಕಿತು. ಈಗ ಮಾವಿನಕೆರೆಯಲ್ಲಿದಾಳೆ. ಅವಳಿಷ್ಟಿಗವಳು ಸುಖವಾಗಿದಾಳೆ; ನಮ್ಮ ತಾಯಿ ಅವಳ ಜೊತೆಯಲ್ಲಿದಾಳೆ. ಆ ಮಾರಿ ಅತ್ತೆಗೆ ದೇವರು ಸರಿಯಾಗಿಮಾಡಿದ. ಮೂರುವರುಷದೊಳಗಾಗಿ ಮೂರು ಹೆಣ್ಣುಮಕ್ಕಳೂ ತೀರಿದರು. ಮಗನೂ ಸಿಡಿಲಿಗೆ ಸಿಕ್ಕಿ ಸತ್ತ. ತನಗೆ ಮೈಯೆಲ್ಲಾ ಊದಿಕೊಂಡು ದೊಡ್ಡ ಬಾಯಿಲೆ ಬೆನ್ನು ಹತ್ತಿತು. ದೇಹ ಕೊಳೆತು ನಾರುತಿದ್ದಾಗ, ಆಸ್ತಿಯನ್ನೆಲ್ಲ ಏನೂ ಅರಿಯದ ಮೂರು ವರುಷದ ಮಗನಿಗೆ ಕೊಟ್ಟು, ಬಾಯಿಗೆ ನೀರಿಲ್ಲದೆ ಪ್ರಾಣ ಬಿಟ್ಟಳು. ಅಂಥ ಹಠಮಾರಿ ಅತ್ತೆಯವರೂ ಇರುತಾರೆ; ಸೊಸೆಯನ್ನು ಹಾಳು ಮಾಡಿ ಬಿಡುತಾರೆ. ಅಂಥವಳೇ ಈ ಸೀತಮ್ಮನ ಅತ್ತೆ. ಆಕೆಯ ಹತ್ತಿರ ಬಾಳುವುದು ಬಹಳ ಕಷ್ಟ" ಎಂದರು.

ಪಕ್ಕದಲ್ಲಿ ಕುಳಿತಿದ್ದ ಸಾವಿತ್ರಮ್ಮ "ನೀವು ಹೇಳಿದುದು ಸರಿ. ಆದರೆ ಎಲ್ಲ ಹೆಣ್ಣುಮಕ್ಕಳೂ ಓದಿರಬೇಕಲ್ಲ. ಈಗ ಸೀತಮ್ಮನಿಗೆ ಸ್ವಲ್ಪವೂ ಓದುಬರೆಹ ಬರುವುದಿಲ್ಲ. ಏನೇ ಆಗಲಿ, ಹೆಣ್ಣುಮಕ್ಕಳಿಗೆ ಕೊನೆಯ ಪಕ್ಷ ಲೋಯರ್ ಸೆಕೆಂಡರಿಯನ್ನಾದರೂ ಮಾಡಿಸಿರಬೇಕು. ಇಲ್ಲದಿದ್ದರೆ ಕಷ್ಟ" ಎಂದರು.

ಪದ್ಮಕ್ಕ "ಏನೂ ಕಷ್ಟವಿಲ್ಲ. ನಮ್ಮೂರಿನಲ್ಲಿ ಕೃಷ್ಣಯ್ಯಂಗಾರ್ ಅಂತ ಇದಾರೆ. ಅವರ ಮಗಳಿಗೆ ಸ್ವಲ್ಪವೂ ಓದು ಬರುತಿರಲಿಲ್ಲ. ಮದುವೆಯಾದ ಮರುದಿನ ಚೇಳು ಕಡಿದು ಗಂಡ ಸತ್ತುಹೋದ. ಆದರೆ ಆ ಹುಡುಗಿ ಎದೆಗುಂದದೆ ಒಂದೇ ಮನಸ್ಸಿನಿಂದ ಓದಿ ಇಪ್ಪತ್ತು ನಾಲ್ಕು ವರುಷ ತುಂಬುವುದರೊಳಗೆ ಡಾಕ್ಟರ್ ಪರೀಕ್ಷೆ ಪಾಸ್ ಮಾಡಿದಳು. ಈಗ ತುಮಕೂರಿನಲ್ಲಿ ಡಾಕ್ಟರ್ ಆಗಿದಾಳೆ; ನೂರೈವತ್ತು ರೂಪಾಯಿ ಸಂಬಳ. ಕೆಲವರ ಮನೆಯಲ್ಲಿ ತಂದೆತಾಯಿಗಳು, ಅತ್ತೆ ಮಾವ ತೊಂದರೆ ಪಡಿಸುವುದು ತಿಳಿದರೆ, ತಮ್ಮ ಹೆಣ್ಣುಮಕ್ಕಳನ್ನು ಮಾವನ ಮನೆಗೆ ಕಳಿಸುವುದೇ ಇಲ್ಲ. ಅಳಿಯ ಸೋತು ಬಂದು ಅಂಗಲಾಚಿಬೇಡಿ ಹೆಂಡತಿಯನ್ನು ಕರೆದುಕೊಂಡು ಹೋಗಬೇಕು" ಎಂದು ಹೇಳಿದಳು.

ರಾಧಮ್ಮನವರು "ಎಲ್ಲರ ಮನೆಯ ಅತ್ತೆಯೂ ಕೆಟ್ಟವಳಲ್ಲ. ನಮ್ಮತ್ತೆ ಇರುವ ತನಕ ನನ್ನನ್ನು ಹೆತ್ತ ಮಗಳಿಗಿಂತ ಹೆಚ್ಚಾಗಿ ಕಾಣು ತಿದ್ದರು. ತಾವು ಸಾಯುವಾಗ ತಮ್ಮ ಮೈಮೇಲಿದ್ದ ಒಡವೆಗಳನ್ನೆಲ್ಲ ನಾನು ಧರಿಸಲೇಬೇಕೆಂದು ನನ್ನ ಹತ್ತಿರ ಮಾತು ತೆಗೆದುಕೊಂಡು, ಪೆಟ್ಟಿಗೆಯ ಬೀಗದ ಕೈಕೊಟ್ಟರು. ಆದರೆ ಸೀತಮ್ಮನ ಅತ್ತೆ ಉರಿಮಾರಿ. ಆಕೆಯ ಗುಣವೂ ಚೆನ್ನಾಗಿಲ್ಲ. ಎಷ್ಟೊಂದು ಸಾಮಾನು ಸಾಲ ತೆಗೆದು ಕೊಂಡು ಹೋಗುತಾಳೆ; ಒಂದನ್ನೂ ವಾಪಸು ಕೊಡುವುದಿಲ್ಲ. ತನಗೆ ಬರಬೇಕಾದುದನ್ನು ಮಾತ್ರ, ಕೊಟ್ಟ ಮಾರನೆಯ ದಿನವೇ ಕೇಳುವುದಕ್ಕೆ ಬರುತಾಳೆ. ಮಾತೆತ್ತಿದರೆ ಸೊಸೆಯ ಮೇಲಿನ ಚಾಡಿ. ಆಕೆಯೊಡನೆ ಮಾತಾಡಬೇಕೆಂದರೆ ನನಗಾಗದು. ಸೀತಮ್ಮ ಒಳ್ಳೆಯ ಅಚ್ಚುಮೆಚ್ಚಿನ ಸೊಸೆ. ಅಂಥವಳನ್ನು ಹೊಂದಿರಲು ಈ ಮಾರಿ ಮಾರೀಚರು ಪುಣ್ಯ ಪಡೆದಿರಬೇಕು. ಎಷ್ಟು ಅಂದರೂ ಅನ್ನಿಸಿಕೊಳ್ಳುತಾಳೆ. ಎದುರಾಡುವುದೇ ಅವಳಿಗೆ ತಿಳಿಯದು. ಅತ್ತೆ ಮಾವ ಸೇರಿ ಅಷ್ಟೊಂದು ಹೊಡೆದರೂ ಗಟ್ಟಿಯಾಗಿ ಅತ್ತರೆ ಪಕ್ಕದ ಮನೆಗೆ ಕೇಳಿಸೀತು, ಎಂದುಕೊಳ್ಳುತಾಳೆ. ನಾವು 'ಏನು ಅದು ಗಲಾಟೆ?' ಎಂದು ಕೇಳಿದರೆ 'ಏನೂ ಇಲ್ಲ' ಎನ್ನು ವುದೊಂದೇ ಆಕೆಗೆ ಗೊತ್ತು. ಎಲ್ಲರೆದುರಿಗೂ ಅತ್ತೆ ಮಾವಂದಿರನ್ನು ಆಡಿಕೊಳ್ಳುವುದಿಲ್ಲ. ಜನಬಳಕೆ ಬೇಕಿದ್ದರೂ ಅತ್ತೆಯ ಅನುಮತಿಯಿಲ್ಲದೆ ಹೊರಗೆ ಬರುವುದಿಲ್ಲ. ಒಳ್ಳೆಯ ಹುಡುಗಿ; ನೋಡುವುದಕ್ಕೂ ಲಕ್ಷಣ ವಾಗಿದಾಳೆ. ಆ ಭಂಗಾರದಂಥ ಆಕೆಯನ್ನು ಈ ರಕ್ಕಸ ರಕ್ಕಸಿಯರು ಹೀರುತಾರೆ . . . . ಓಹೊ! ಎತ್ತಿನ ಗೆಜ್ಜೆಯ ಶಬ್ದವಾಗುತಿದೆ. ಬಾಗಿಲ ಕಡೆ ನೋಡಿ, ಸರೋಜಮ್ಮ. ಊರಿಗೆ ಹೊರಟರೇನೊ" ಎಂದು ಹೇಳಿದರು.

ಸರೋಜಮ್ಮ "ಹೌದು, ಹುಡುಗರೆಲ್ಲ ಬಾಗಿಲಲ್ಲಿ ನಿಂತಿದಾರೆ. ಸೀತಮ್ಮ ಈ ಕಡೆ ಬಂದಳು" ಎಂದರು.

ಮೆಟ್ಟಿಲು ಹತ್ತಿ ಸೀತಮ್ಮ ಒಳಗೆ ಬಂದಳು. "ಓಹೊ, ಎಲ್ಲ ಇಲ್ಲಿಯೇ ಇದೀರಿ! ನಾನು ಊರಿಗೆ ಹೋಗಿಬಿಟ್ಟು ಬರುತೇನೆ. ನಿಮ್ಮೆ ಲ್ಲರ ಆಶೀರ್ವಾದ ನನ್ನ ಮೇಲಿರಲಿ. ನೆನಪಿರಲಿ" ಎಂದು ಎಲ್ಲರಿಗೂ ನಮಸ್ಕಾರ ಮಾಡಿದಳು. ರಾಧಮ್ಮನವರು "ಬಾ, ಕುಳಿತುಕೊ ಸೀತಮ್ಮ. ಒಂದು ನಿಮಿಷ ಕುಳಿತುಕೊ. ಎಲ್ಲ ಮಕ್ಕಳನ್ನೂ . ಕರೆದುಕೊಂಡು

ಹೋಗುತೀಯೇನು ?"

ಹಾಗೆಯೇ ಕುಳಿತುಕೊಳ್ಳುತ್ತಾ "ಇಲ್ಲ, ರಾಜು ಒಬ್ಬನು ಮಾತ್ರ ಇಲ್ಲಿಯೆ ಇರಬೇಕೆಂದು ಇಟ್ಟುಕೊಂಡಿದಾರೆ. ಉಳಿದವರನ್ನು ನನ್ನ ಸಂಗಡಲೇ ಕರೆದುಕೊಂಡು ಹೋಗುತೇನೆ. ಹೊತ್ತಾಯಿತು. ಕಾಯುತಿದಾರೆ. ಹೋಗಿ ಬರುತೇನೆ" ಎಂದು ಹೇಳಿ ಎದ್ದು, ಕುಂಕುಮ ಹಚ್ಚಿಕೊಂಡು, ಕೊಟ್ಟ ತಾಂಬೂಲ ತೆಗೆದುಕೊಂಡು ಹೊರಗೆ ಬಂದಳು. ರಾಧಮ್ಮನವರ ಮನೆಯಲ್ಲಿದ್ದವರೆಲ್ಲ ನೋಡಲು ಕಟ್ಟೆಯ ಮೇಲೆ ಬಂದು ನಿಂತರು.

ಗಾಡಿ ಹೊರಡಲು ಸಿದ್ಧವಾಗಿತ್ತು. ಲಲಿತ ಮೂರು ಮಕ್ಕಳನ್ನು ಗಾಡಿಯಲ್ಲಿ ಕೂಡಿಸಿ ತಾನೂ ಹತ್ತಿದಳು. ಸೂರಪ್ಪನವರು ಬಟ್ಟೆಗಂಟು ಹಾಸಿಗೆಗಳನ್ನು ಗಾಡಿಯಲ್ಲಿ ಹಾಕಿ, ಸೊಸೆಗೆ ಹತ್ತಲು ಹೇಳಿದರು. ಆ ಮೇಲೆ ತಾವು ನೀರು ತುಂಬಿದ ರೈಲುತಂಬಿಗೆಯೊಡನೆ ಹತ್ತಿದರು. ಗಾಡಿ ಹೊರಟಿತು. ಅತ್ತೆ ಮುಂಬಾಗಿಲಲ್ಲಿ ನಿಂತು ನೋಡುತ್ತಿದ್ದಳು. ಕೃಷ್ಣಮೂರ್ತಿ ಕಟ್ಟೆಯ ಮೇಲೆ ನಿಂತಿದ್ದ. ಗಾಡಿ ಹೊರಡುವವರೆಗೂ ಅದರ ಹತ್ತಿರ ಸೀತಮ್ಮನ ಹನ್ನೊಂದು ವರುಷದ ಮಗ ರಾಜು ನಿಂತಿದ್ದ. ರಾಧಮ್ಮನವರ ಮನೆಯ ಕಟ್ಟೆಯ ಮೇಲಿದ್ದ ಹೆಂಗಸರ ಸಾಲು ಸುಮ್ಮನೆ ನೋಡುತ್ತಿತ್ತು. ಗಾಡಿ ಚೌಕದವರೆಗೆ ಹೋಗಿ ಎಡಕ್ಕೆ ತಿರುಗಿತು. ತಾಯಿ, ಮಗ, ಮೊಮ್ಮಗ ಮೂವರೂ ಒಳಗೆ ಹೋದರು.

ಹೊರಗಿದ್ದವರೆಲ್ಲ ರಾಧಮ್ಮನವರ ಮನೆಯೊಳಗೆ ಒಬ್ಬೊಬ್ಬರಾಗಿ ಬಂದರು. "ಇದುವರೆಗೂ ಹುರಿದು ಬಾಯಿಗೆ ಹಾಕಿಕೊಳ್ಳಲು ಏನೂ ಅರಿಯದ ಅಬಲೆ ಇವನ ಕೈಯೊಳಗಿದ್ದಳು. ಇನ್ನು ಆರು ಏಳು ತಿಂಗಳು ಸೂರಪ್ಪನ ಕೈ ಚುಮುಚುಮು ಎನ್ನಿಸುತಿರಬಹುದು. ಯಾರಿಗೆ ಹೊಡೆಯಲಿ, ಯಾರಿಗೆ ಬಡಿಯಲಿ ಎಂತ ಹುಡುಕುತಲೇ ಇರುತದೆ. ಇನ್ನು ಮೇಲೆ—ಹಿಂದೊಂದು ಸಾರಿ ಸಾಬಿಯ ಸಂಗಡ ಗುದ್ದಾಡಿದನಲ್ಲ ಹಾಗೆ—ಬೀದಿಯವರ ಸಂಗಡ ಕಾಲುಕೆದರಿಕೊಂಡು ಬರುತಾನೆ. ಆದರೆ ಯಾರು ಸುಮ್ಮನಿರುತಾರೆ ?" ಎಂದು ದೊಡ್ಡಮನೆ ಭೀಮರಾಯರ ಮಗಳು ಗೋದಾವರಿ ಹೇಳಿದಳು.

• ಸರೋಜಮ್ಮ "ನಾನು ಹೇಳಿದ ಹಾಗೆ ಇವೊತ್ತು ಸ್ವಲ್ಪವೂ ರಾಮಾಯಣ ಸಾಗಲೇ ಇಲ್ಲ. ಈ ಪದ್ದಕ್ಕ ಬಂದ ದಿನವೆಲ್ಲ ಹೀಗೆಯೇ" ಎಂದರು.

"ಹೌದಮ್ಮಾ, ಹೌದು. ಇನ್ನು ಓದಿಕೊಳ್ಳಿ; ಬೇಕಾದಷ್ಟು ಓದಿ ಕೊಳ್ಳಿ. ಆಗಲೇ ನಾಲ್ಕೂವರೆಯಾಯಿತು. ಅವರು ಮನೆಗೆ ಬಂದುಬಿಡು ತಾರೆ. ಕಾಫಿಗೆ ಒಲೆ ಹಚ್ಚಬೇಕು. ನಾನು ಬರುತ್ತೇನೆ" ಎಂದು ಪದ್ದಕ್ಕ ಹೊರಟುಬಿಟ್ಟಳು.

೪

ಚಿನ್ನದಕಟ್ಟೆ ಚಿಕ್ಕಹಳ್ಳಿಯೂ ಅಲ್ಲ; ದೊಡ್ಡ ಪಟ್ಟಣವೂ ಅಲ್ಲ. ಊರು ಅಚ್ಚುಕಟ್ಟಾಗಿದೆ. ಗೋವಿಂದರಾಯರು ಸಾಧಾರಣ ಆಸ್ತಿವಂತರು. ಹೊಲ ಮನೆ ಚೆನ್ನಾಗಿದೆ. ಆದರೆ ಎರಡನೆಯ ಹೆಂಡತಿ. ಮೊದಲನೆಯಾಕೆ ಇಬ್ಬರು ಮಕ್ಕಳನ್ನು ಬಿಟ್ಟು ಕಾಲವಾದಳು. ಮೂವತ್ತು ವರುಷದ ಹೆಣ್ಣು ಮಗಳಿದಾಳೆ; ಇಪ್ಪತ್ತೈದು ವರುಷದ ಗಂಡು ಮಗ ಇದ್ದಾನೆ. ಆತ ಶುದ್ಧ ಅವಿವೇಕಿ. ಎರಡನೆಯ ಹೆಂಡತಿಗೆ ಇನ್ನೂ ಮಕ್ಕಳಿಲ್ಲ. ಆದರೂ ಎಲ್ಲ ಆಡಳಿತ ಆಕೆಯದೇ. ಎರಡನೆಯ ಮದುವೆ ಯಾದ ಮೇಲೆ ಗೋವಿಂದರಾಯರು ನೇಗಿಲ್ಲ ಎತ್ತಾದರು. ಅವರ ಹೆಂಡತಿ ಪಾರ್ವತಮ್ಮನ ಅಪ್ಪಣೆಗೆ ಚೂರೂ ಎದುರಾಡುವ ಚೈತನ್ಯವಿಲ್ಲ. ಆಕೆಯ ಮಾತಿನಂತೆ ಮಾವಿನ ತೋಟ ಮಾರಿ ಮೂರು ಸೇರು ಬಂಗಾರ ಕೊಂಡು ದಾಯಿತು. ಎಲ್ಲ ಅವಳ ಕೊರಳೊಳಗೆ; ಕೈಯೊಳಗೆ. ಆತನಿಗೆ ತಡೆಯ ಲಾರದ ಹೊಟ್ಟೆನೋವು ಬೇರೆ ಆಗಾಗ ಪೀಡಿಸುತ್ತಿತ್ತು. ಅದರ ಕಾಟದಲ್ಲಿ ಆತ ತುಂಬ ಇಳಿದುಹೋದ. ಹೊಟ್ಟೆನೋವು ಬಂದಾಗ ಹುಚ್ಚನಾಗಿ ಬಿಡುತ್ತಾನೆ. ಯಾರು ಏನು ಹೇಳಿದರೆ ಆ ಔಷಧ ಮಾಡಿಬಿಡುತ್ತಾನೆ. ಯಾವಯಾವುದೊ ಸೊಪ್ಪು ತಂದು, ಅರೆದು ನುಂಗಿಬಿಡುತ್ತಾನೆ. ನೋವು ಕಡಮೆಯಾಗುವ ಸೂಚನೆಯೇ ಇಲ್ಲ. ಆಗಾಗ ಮತ್ತೆ ಮತ್ತೆ ಬರುತ್ತಿದೆ. ಆಳು ಕುಳ್ಳು. ಮೈಬಣ್ಣ ಬಿಳುಪು. ವಯಸ್ಸು ಐವತ್ತು ಮೀರಿದೆ. ಕೂದಲೆಲ್ಲ ನರೆತಿದೆ. ಮನುಷ್ಯ ಸಿಡುಕಲ್ಲದಿದ್ದರೂ ಆತನಿಗೆ ಯಾರ ಮೇಲೂ ಹೆಚ್ಚು ಮಮತೆಯಿಲ್ಲ.

ಪಾರ್ವತಮ್ಮನಿಗಿನ್ನೂ ಇಪ್ಪತ್ತೈದು ವರುಷ. ಬಣ್ಣ ಕಪ್ಪಾದರೂ ನೋಡುವುದಕ್ಕೆ ಲಕ್ಷಣವಾಗಿದ್ದಾಳೆ. ಆದರೆ ಆಡಳಿತ ನಡಸಬೇಕೆಂಬ ಹಂಬಲು ಜಾಸ್ತಿ. ಮಲಮಗನನ್ನೊಮ್ಮೆ ಕೆಣಕಿ ಅವನ ಕೈಯಲ್ಲಿ ತುಂಬ ಏಟು ತಿಂದುಬಿಟ್ಟಳು. ಆಮೇಲೆ ಅವನ ಮೇಲೆ ದೌಲತ್ತು ನಡಸುವುದನ್ನು

ಬಿಟ್ಟಳು. ಆದರೆ ಗಂಡನ ಲಗಾಮನ್ನು ಮಾತ್ರ ಜೋಪಾನವಾಗಿ ಕೈಯ ಲ್ಲಿಟ್ಟುಕೊಂಡಿದ್ದಾಳೆ; ಖಜಾನೆಯ ಬೀಗದ ಕೈ ಪಾರ್ವತಮ್ಮನ ಕೊರಳಲ್ಲಿ. ತನಗೆ ಬೇಕಾದ ಸಾಮಾನುಗಳನ್ನೆಲ್ಲ ತರಿಸಿಕೊಳ್ಳುತ್ತಾಳೆ. ವಾಸನೆಯೆಣ್ಣೆ, ವಾಯಿಲುಸೀರೆ-ಇವೆಲ್ಲ ಅವಳಿಗೆ ಬೇಕು. ಹಣೆಯ ಮೇಲೆ ನಾಸುವೆ ಯಷ್ಟು ಕುಂಕುಮ. ಸುತ್ತುಕರಿಸಿದ ಗುಂಗುರುಮುಂಗುರುಳು. ತಾನು ಮನೆಗೆ ಬಂದ ಮೇಲೆ ಮನೆಯ ಸಂಸಾರದೊಳಗೆ ಅಡುಗೆಯವನೊಬ್ಬ ಹೆಚ್ಚಾದ. ಮಧ್ಯಾಹ್ನವೆಲ್ಲ ಕಸೂತಿ. ಕಥೆ ಪುಸ್ತಕದೊಂದಿಗೆ ಕಾಲಹರಣ. ಎಲ್ಲ ಕೆಲಸಗಳನ್ನೂ ಅಡುಗೆಯವನೇ ಮಾಡಬೇಕು. ಮಕ್ಕಳಿಲ್ಲದು ದೊಂದು ದೊಡ್ಡ ಚಿಂತೆ. ಅಂತೂ ಮನೆಯ ಯಜಮಾನಿ, ಸುಖವಾಗಿ ಕಾಲ ಕಳೆಯುತ್ತಾಳೆ; ಮಲಮಗಳು ಬಂದರೆ ಹುರಿದು ಮುಕ್ಕುತ್ತಾಳೆ.

ಮಗ ಸುಬ್ಬರಾಯ 'ಶುದ್ಧ ಪೋಲಿ ಸುಬ್ಬಣ್ಣ' ಆಗಿಬಿಟ್ಟಿದ್ದಾನೆ. ಆತ ಸ್ವಲ್ಪ ಐಲು. ಅಥವಾ ತಿಂದು ಹೆಚ್ಚಾಗಿ ಹಾಗೆ ಮಾಡುತ್ತಿದ್ದಾನೊ ಏನೊ! ಇಂಗ್ಲಿಷ್ ಮೂರನೆಯ ತರಗತಿಯಲ್ಲಿರುವಾಗಲೇ ಓದಿಗೆ ಮುಕ್ತಾಯ. ಜೊತೆಗೆ ಸರಿಯಾದ ಗೆಳೆಯರೇ ಸಿಕ್ಕರು. ತೇರಿನ ಬೀದಿಯ ಶಾಮಭಟ್ಟರ ಮಗ, ಚಿಲ್ಲರೆ ಅಂಗಡಿಯ ಪಾಪಣ್ಣಶೆಟ್ಟರ ಮಗ. ಎಲ್ಲ ಶುದ್ಧ ಪುಂಡರು; ಊರಿಗೆಲ್ಲ ಸುಪ್ರಸಿದ್ಧರು. ಅವರ ಗುಂಪಿನ ಮುಂದಾಳು ಈ ಸುಬ್ಬಣ್ಣ. ಇವನಿಗೆ ವಯಸ್ಸು ಮೀರಿದ್ದರೂ ಮದುವೆಯಾಗಿಲ್ಲ. ಯಾರೂ ಹೆಣ್ಣು ಕೊಡಲು ಒಪ್ಪಿಲ್ಲ. ಬೆಳಗ್ಗೆ ಎದ್ದು, ತಿಪ್ಪಯ್ಯನ ಹೋಟ ಲಲ್ಲಿ ಎರಡೆರಡು ಮಸಾಲೆ ತಿಂದು ಹರಟೆ ಹೊಡೆಯುತ್ತಾ ಗೆಳೆಯರೊಡನೆ ಕೂಡುವುದು. ಒಂದು ಗಂಟೆಯ ಮೇಲೆ ಮನೆಗೆ ಬಂದು ಸ್ನಾನಮಾಡಿ ಊಟಕ್ಕೇಳುವುದು. ಊಟವಾಗುವುದೇ ತಡ, ದರ್ಜಿ ತಮ್ಮಯ್ಯ ಬಂದು ಕರೆದುಬಿಡುತ್ತಾನೆ. ಸರಿ, ಅವನಂಗಡಿಯ ಹಿಂದಿನ ಕೋಣೆಯಲ್ಲಿ ಕುಳಿತು, ಸಂಜೆ ಐದು ಗಂಟೆಯುವರೆಗೆ ಇಸ್ಪೀಟು ಹೊಡೆಯುವುದು. ಯಾರೂ ಸಿಕ್ಕದಿದ್ದರೆ ಆರು ಗಂಟೆಯುವರೆಗೆ ಮಲಗಿರುವುದು. ಎದ್ದು ಮತ್ತೆ ತಿಪ್ಪ ಯ್ಯನ ಹೋಟಲಿಗೆ ಭೇಟಿ. ಆಮೇಲೆ ಹರಟುತ್ತಾ ಊರೆಲ್ಲ ತಿರುಗುವುದು. ಎಲ್ಲರ ಮನೆಯ ಜಗಳದಲ್ಲಿಯೂ ತಲೆ ಹಾಕುವುದು. ಊರಿನವರ ಕೈಯ ಲ್ಲೆಲ್ಲ ಟಿನ್ನಿಸಿಕೊಳ್ಳುವುದು. ಮಾರಾಮಾರಿ ಎಂದರೆ ತುಂಬ ಪ್ರೀತಿ. ಹೊಡೆ ದಾಟಕ್ಕೆ ಸದಾ ಸಿದ್ಧ. ಊರಿನ ಯಾವ ಜಗಳದಲ್ಲಿಯೂ ಸುಬ್ಬರಾಯನ ಹೆಸರು ಮೊದಲು. ಅಮಾವಾಸ್ಯೆ ಹತ್ತಿರ ಬಂದ ಹಾಗೆಲ್ಲ ತಲೆ ಕೆಡುತ್ತಿತ್ತು.

ಅಂದು ಮಾತ್ರ ಮನೆಯಲ್ಲೆ ಕುಳಿತುಬಿಡುತ್ತಿದ್ದ. ಎದುರಿಗೆ ಬಂದವರನ್ನು ಸುಮ್ಮನೆ ದಿಟ್ಟಿಸಿ ನೋಡುತ್ತಿದ್ದ. ಅವರು ತೆಪ್ಪಗೆ ಹೋಗದೆ ಏನಾದರೂ ಮಾತಾಡಿದರೆ 'ಘುಪಾ ಘುಪಾ' ಹೇರಿ ಬಿಡುತ್ತಿದ್ದ. ಅವನಿಗದೊಂದು ರೀತಿಯ ರೋಗ. ಚಿಕ್ಕಂದಿನಲ್ಲಿ ಅದು ಇನ್ನೂ ಹೆಚ್ಚಾಗಿತ್ತು. ಅಮಾವಾಸ್ಯೆ ಹತ್ತಿರ ಬಂದರೆ ಇವನು ರಾತ್ರಿ ಅವೇಳೆಗಳಲ್ಲಿ ಎದ್ದು ಬಿಡುತ್ತಿದ್ದ. ನೇರವಾಗಿ ಹಿತ್ತಲಿಗೆ ಹೋಗಿ ತೆಂಗಿನಮರ ಹತ್ತಿಬಿಡುತ್ತಿದ್ದ; ತಕ್ಷಣವೇ ಇಳಿದುಬಿಡುತ್ತಿದ್ದ; ಮತ್ತೆ ಹತ್ತುತ್ತಿದ್ದ; ಪುನಃ ಇಳಿಯುತ್ತಿದ್ದ. ಹೀಗೆ ಇಪ್ಪತ್ತು ಮೂವತ್ತು ಸಲ ಸುಮ್ಮನೆ ಹತ್ತಿ ಇಳಿಯುತ್ತಿದ್ದ. ಒಂದೊಂದು ದಿನ ಮುಂಭಾಗದ ಬೇಲಿಯನ್ನು ಪದೇಪದೇ ಹಾರುತ್ತಿದ್ದ. ಒಂದು ಸಾರಿ ಹಾಸಿಗೆಯನ್ನು ಸುತ್ತಿಕೊಂಡು ಎಲ್ಲಿಗೋ ಹೋಗಿಬಿಟ್ಟಿದ್ದ. ಬೆಳಗಿನ ಜಾವ ಬಂದು ಮಲಗಿದ್ದ. ಒಮ್ಮೆ ಹೊಳೆಗೆ ಹೋಗಿ ಉಟ್ಟ ಬಟ್ಟೆಯಲ್ಲಿಯೆ ಈಜಾಡಿ ಬಂದು ಮಲಗಿಬಿಟ್ಟಿದ್ದ. ಮನೆಯವರಾರೂ ಈ ವಿಚಿತ್ರ ನಡವಳಿಕೆಯ ನಡುವೆ ಅವನನ್ನು ತಡೆಯುತ್ತಿರಲಿಲ್ಲ. ವೈದ್ಯರು ಅವನು ಏನೇ ಮಾಡಲಿ ನೀವು ಸುಮ್ಮನಿದ್ದುಬಿಡಿ. ಆ ಸ್ಥಿತಿಯಲ್ಲಿ ಅವನಿರುವಾಗ ಮಾತಾಡಿಸಬೇಡಿ, ಅನಾಹುತ ನಡೆದುಬಿಡುತ್ತದೆ. ಎಂದು ಹೆದರಿಸಿಬಿಟ್ಟಿದ್ದರು. ಗೋವಿಂದರಾಯರು ಒಂದೆರಡು ಅಮಾವಾಸ್ಯೆಗಳಲ್ಲಿ ಅವನಿಗೆ ಕೈಕಾಲು ಕಟ್ಟಿ ಮಲಗಿಸಿದ್ದರು. ಆದರೆ ಅದರಿಂದ ಏನೂ ಪ್ರಯೋಜನವಾಗಲಿಲ್ಲ. ಬೆಳಗಾಗುವುದರೊಳಗೆ ಗೋಡೆಗೆ ತಲೆತಲೆ ಚಚ್ಚಿಕೊಂಡು ದೊಡ್ಡಗಾಯ ಮಾಡಿಕೊಂಡುಬಿಟ್ಟಿದ್ದ. ಹಾಳಾಗಿ ಹೋಗಲೆಂದು, ಮಾರನೆಯಬಾರಿಯಿಂದ ಸುಮ್ಮನಿದ್ದರು. ಗೋವಿಂದರಾಯರಿಗೆ ಮಗನ ಈ ಅನಾರೋಗ್ಯದ ಚಿಂತೆ ಬೇರೆ ಕಿತ್ತು ತಿನ್ನುತ್ತಿತ್ತು. ಪೋಲಿಯಾದರೂ ಪರವಾಯಿಲ್ಲ, ಮನೆತನಕ್ಕೊಬ್ಬ ಮಗನಿದ್ದರೆ ಸಾಕು, ಎಂದನ್ನಿಸಿತ್ತು. ಮಗನ ಈ ರೋಗ ಅನೇಕರಿಗೆ ತಿಳಿದಿದ್ದುದರಿಂದಲೇ ಹೆಣ್ಣುಕೊಡಲು ಯಾರೂ ಮುಂದೆ ಬರುತ್ತಿರಲಿಲ್ಲ. ಆದರೆ ಇಪ್ಪತ್ತನೆಯವಯಸ್ಸು ದಾಟಿದಮೇಲೆ, ಅವೇಳೆಯಲ್ಲಿ ಎದ್ದು ಕುಣಿಯುವ ಈ ರೋಗ ಕಡಮೆಯಾಯಿತು. ಚಿಕ್ಕವನಾಗಿದ್ದಾಗ ತಂದೆಗೆ ಸ್ವಲ್ಪ ಹೆದರುತ್ತಿದ್ದ. ಅವರ ಕೈಯಲ್ಲಿ ತುಂಬ ಏಟುತಿನ್ನುತ್ತಿದ್ದ. ಅಪರೂಪಕ್ಕೆ ಊರಿಗೆ ಸಿನಿಮಾ ಬರುತ್ತಿತ್ತು. ತಂದೆಗೆ ಅದು ಬೇಡ. ಆದರೆ ಸುಬ್ಬಣ್ಣ ಪ್ರತಿಚಿತ್ರಕ್ಕೂ ಹೋಗಬೇಕು. ಆಗ ಒಬ್ಬ ವಾರದ

ಹುಡುಗ ಇವರ ಮನೆಯಲ್ಲಿಯೇ ವಾಸವಾಗಿದ್ದ. ಅವನು ಮುಂಭಾಗದ ಕೋಣೆಯಲ್ಲಿ ಮಲಗುತ್ತಿದ್ದ. ಸುಬ್ಬಣ್ಣ ಅವನ ಕೈಗೊಂದು ಹಗ್ಗ ಕಟ್ಟಿ ಅದರ ಇನ್ನೊಂದು ತುದಿಯನ್ನು ಕಿಟಕಿಯ ಮೂಲಕ ಹೊರಗೆ ಬಿಟ್ಟುಕೊಂಡಿರುತ್ತಿದ್ದ. ಸಿನಿಮಾದಿಂದ ಬಂದ ಕೂಡಲೆ ಆ ಹಗ್ಗ ಹಿಡಿದೆಳೆಯುತ್ತಿದ್ದ. ಹುಡುಗ ಕೂಗದೆ ಎದ್ದು ಬಾಗಿಲು ತೆರೆಯುತ್ತಿದ್ದ. ಮಾತಾಡಿದರೆ ತಂದೆಗೆ ಕೇಳಿಸೀತೆಂದು ಸುಬ್ಬಣ್ಣ ಈ ಉಪಾಯ ಹುಡುಕಿದ್ದ; ಆ ಹುಡುಗನೊಡನೆ ಈ ಒಪ್ಪಂದ ಮಾಡಿಕೊಂಡಿದ್ದ. ಆದರೆ ವಯಸ್ಸಾದ ಮೇಲೆ ತಂದೆಗೆ ಸ್ವಲ್ಪವೂ ಹೆದರುವುದಿಲ್ಲ.

ಗೋವಿಂದರಾಯರಿಗೆ ಮಗನ ಮದುವೆ ನೋಡಬೇಕೆಂಬಾಸೆ. ಆದರೆ ಹೆಣ್ಣು ಹುಡುಕುವುದು ಬಹಳ ಕಷ್ಟವಾಯಿತು. ಕೊನೆಗೆ ಸಿದ್ಧಾಪುರದ ಸಾಹುಕಾರ ಶಾಮರಾಯರು ಬಲೆಗೆ ಬಿದ್ದರು. ಹೆಂಡತಿಯ ಅಪ್ಪಣೆಯ ಮೇರೆ ಗೋವಿಂದರಾಯರು ವರದಕ್ಷಿಣೆಯನ್ನೂ ಕೇಳಿದರು. ಶಾಮರಾಯರ ಮಗಳಿಗೆ ಇಪ್ಪತ್ತುವರುಷ. ಆದರೂ ಮದುವೆಯಾಗಿರಲಿಲ್ಲ. ನೋಡುವುದಕ್ಕೆ ಅಷ್ಟೇನೂ ಲಕ್ಷಣವಾಗಿಲ್ಲದಿದ್ದರೂ ಬಣ್ಣ ಬಿಳುಪು ವಿದ್ಯಾಭ್ಯಾಸದಲ್ಲಿ, ಪ್ರೌಢಶಾಲೆಯ ಮೆಟ್ಟಲನ್ನು ಹತ್ತಿ ಕೈಬಿಟ್ಟಿದ್ದಳು. ಮೂರುಸಾರಿ ವರ ಗೊತ್ತಾಗಿ ಏನೇನೊ ಕಾರಣಗಳಿಂದ ಮದುವೆ ನಿಂತುಹೋಗಿತ್ತು. ಅವಳಿಗೆ ಮೂರ್ಛೆರೋಗ ಬರುತ್ತದೆ; ಮೊಳಕಾಲ ಮೇಲೆ ಮೂರುಕಾಸಿನಗಲ ತೊನ್ನು ಹಿಡಿದಿದೆ. ಈ ವಿಷಯ ಅನೇಕ ಬೀಗರಿಗೆ ತಿಳಿದು ಬಿಡುತ್ತಿತ್ತು. ಸರಿ, ಮದುವೆಗೆ ನಡುವೆ ಮುಕ್ತಾಯ. ಒಂದು ಸಾರಿ ಲಗ್ನಪತ್ರಿಕೆಗಳೆಲ್ಲ ಅಚ್ಚಾಗಿ ಲಗ್ನ ನಿಂತಿತು. ಇನ್ನೊಮ್ಮೆ ಮುಹೂರ್ತಕ್ಕೆ ಮುಕ್ಕಾಲು ಗಂಟೆ ಇದೆ, ಎನ್ನುವಾಗ ಮದುವೆ ನಿಂತಿತು. ಆದುದರಿಂದ ಹೆತ್ತ ತಂದೆತಾಯಿಗಳಿಗೆ ಆಕೆಯ ಮದುವೆಯದೇ ಒಂದು ದೊಡ್ಡ ಚಿಂತೆ. ವರದಕ್ಷಿಣೆ ಕೊಡಲು ಸಿದ್ಧವಾಗಿದ್ದರು. ವರಬರಗಾಲ; ಸುಮ್ಮನಿದ್ದರು.

ಗೋವಿಂದರಾಯರು ಹೆಣ್ಣು ಹುಡುಕಿಕೊಂಡು ಒದ್ದಾಡುತ್ತಿರುವುದು ಬೆಂಗಳೂರಿನ ಚನ್ನಕೃಷ್ಣಯ್ಯನವರಿಗೆ ತಿಳಿಯಿತು. ಅವರೂ ಸಿದ್ಧಾಪುರದ ಶಾಮರಾಯರೂ ತುಂಬ ಮಿತ್ರರು. ಶಾಮರಾಯರು ಮಗಳಿಗೆ ವರ ಹುಡುಕುತ್ತ ಬೆಂಗಳೂರಿಗೆ ಬಂದಿದ್ದಾಗ ಚನ್ನಕೃಷ್ಣಯ್ಯನವರ ಮನೆಯಲ್ಲಿಯೇ ಇಳಿದುಕೊಂಡಿದ್ದರು. ಬೆಂಗಳೂರಿಗೆ ಹೋಗಿದ್ದ

ಗೋವಿಂದರಾಯರಿಗೂ ಶಾಮರಾಯರಿಗೂ ಭೇಟಿಯಾಯಿತು. ಚನ್ನ ಕೃಷ್ಣಯ್ಯನವರ ಮಧ್ಯಸ್ಥಿಕೆಯ ಮೂಲಕ ಮದುವೆ ನಿಶ್ಚಯವಾಯಿತು. ಸಾವಿರದೈನೂರು ರೂಪಾಯಿ ವರದಕ್ಷಿಣೆ ಕೊಡಲು ಶಾಮರಾಯರು ಒಪ್ಪಿದರು. ಅವರ ಊನು ಇವರಿಗೆ ತಿಳಿಯದು; ಇವರ ಊನು ಅವರಿಗೆ ತಿಳಿಯದು. ಇಬ್ಬರ ಒಡಕೂ ಚನ್ನಕೃಷ್ಣಯ್ಯನಿಗೆ ಗೊತ್ತು.

ಮಗನಿಗೆ ಅಂಥ ದೊಡ್ಡರೋಗ ಇದ್ದರೂ ಸಾವಿರದೈನೂರು ಹಣ ಚೆಲ್ಲಿ ಹೆಣ್ಣು ಕೊಡುವವರು ಸಿಕ್ಕರಲ್ಲ, ಎಂದು ಗೋವಿಂದರಾಯರಿಗೆ ಬಲು ಸಂತೋಷ. ಮಗಳ ರೋಗ ತಿಳಿಯದ ಬೆಪ್ಪರಿಗೆ ದುಡ್ಡಿನ ಮಂಕುಬೂದಿ ಎರಚಿದ್ದಕ್ಕೂ ಸಾಹುಕಾರರ ಮಗನೇ ಸಿಕ್ಕನಲ್ಲ, ಎಂದು ಶಾಮರಾಯರಿಗೆ ಆನಂದ. ಇನ್ನು ತಿಂಗಳೊಳಗಾಗಿ ಒಂದು ಒಳ್ಳೆಯ ಮುಹೂರ್ತ ಇದೆ. ಅಂದೇ ನಡೆಯಲಿ, ಎಂದು ತೀರ್ಮಾನಿಸಿದರು.

ಸಾಹುಕಾರರ ಮನೆಯ, ಓದು ಕಲಿತ ಹೆಣ್ಣು ಸಿಕ್ಕಿದ್ದಾಳೆ, ಒಡವೆ ವಸ್ತ್ರ ಚೆನ್ನಾಗಿ ಕೊಡೋಣ—ಎಂಬುದು ಗೋವಿಂದರಾಯರ ಇಷ್ಟ. ಬಂಗಾರ ಕೊಳ್ಳುವ ದಿನವಲ್ಲ. ಹೆಂಡತಿಯ ಮೈಮೇಲೆ ಹೆಚ್ಚಾಗಿರುವ ಒಂದೆರಡು ಒಡವೆಗಳನ್ನು ಮುರಿಸಿ ಮಾಡಿಸಿದರಾಯಿತು, ಎಂದು ಕೊಂಡರು. ಹೆಂಡತಿ ಸುಮ್ಮನಿರುತ್ತಾಳೆಯೆ! ಮಗನ ಮದುವೆ ಮಾಡುವುದರಲ್ಲಿ ನನ್ನ ಕೊರಳು ಬರಿದು ಮಾಡುವುದಕ್ಕೆ ಹೊರಟಿರೇನು ? ಅಬ್ಬ!' ಎಂದುಬಿಟ್ಟಳು. ಸರಿ. ಜಗಳ. ಗೋವಿಂದರಾಯರಿಗೂ ಪಾರ್ವತಮ್ಮನವರಿಗೂ ಒಂದು ದಿನ ಮಾರಾಮಾರಿಯೆ ನಡೆದು ಹೋಯಿತು. 'ನಾನು ಬಾವಿಗೆ ಬಿದ್ದುಬಿಡುತೇನೆ; ವಿಷ ತೆಗೆದುಕೊಂಡು ಬಿಡುತೇನೆ, ತಲೆ ಒಡೆದುಕೊಂಡುಬಿಡುತೇನೆ' ಎಂದು ಏನೇನೋ ಹೆದರಿಸಿದರು. ಹೆಂಡತಿ ಗಟ್ಟಿಗಿತ್ತಿ. ಬೂಟಾಟಿಕೆವಿದ್ಯಕ್ಕೆ ಬಲಿಯಾದಾಳೇ! ಜಗ್ಗಲಿಲ್ಲ. ಮಗನೂ ಮನೆಯಲ್ಲಿರಲಿಲ್ಲ ಕೊನೆಗೆ ಹೊಸಬತ್ತ ಮಾರಿ ಬಂದ ಅರ್ಧ ಹಣದಲ್ಲಿ ಬಂಗಾರ ಕೊಳ್ಳುವುದೆಂದು ತೀರ್ಮಾನ ವಾಯಿತು. ಮದುವೆಯ ಎಲ್ಲ ಸಿದ್ಧತೆಯೂ ನಡೆಯಿತು; ಹದಿನೈದೇ ದಿನ ಉಳಿಯಿತು.

ಅಂದು ಶುಕ್ರವಾರ. ಸಂಜೆ ಐದು ಗಂಟೆಯ ಸಮಯ. ಮನೆಯ ಬಾಗಿಲಿಗೆ ಗಾಡಿ ಬಂದು ನಿಂತಿತು ಸೂರಪ್ಪ ಗಾಡಿಯಿಂದಿಳಿದರು. ಸೀತಮ್ಮನೂ ಮಕ್ಕಳೊಂದಿಗೆ ಇಳಿದಳು. ಗೋವಿಂದರಾಯರು ಜಗಲಿಯ

ಮೇಲೆ ಪಂಚಾಂಗ ನೋಡುತ್ತ ನಿಂತಿದ್ದರು. ಪಾರ್ವತಮ್ಮ ಬೀದಿಯ ಬಾಗಿಲಲ್ಲಿ ಕಸೂತಿ ಹಾಕುತ್ತ ಕುಳಿತಿದ್ದಳು. ಗೋವಿಂದರಾಯರು "ನಮಸ್ಕಾರ, ಸೂರಪ್ಪನವರಿಗೆ. ಒಳಗೆ ಹೋಗು, ಸೀತಕ್ಕ" ಎಂದರು. ಗಾಡಿಯುವನು ಹಾಸಿಗೆ ಸಾಮಾನುಗಳನ್ನು ಒಳಗಿರಿಸಿ ಎತ್ತು ಬಿಚ್ಚುವುದಕ್ಕೆ ಹೊರಟ. ಸೂರಪ್ಪ "ಲಚುಮಾ. ಇರಲಿ ಬಿಡೋ ಯಾಕೆ ಬಿಚ್ಚುತಿ?" ಎಂದರು.

ಗೋವಿಂದರಾಯರು "ಒಳಗೆ ಬನ್ನಿ ಸೂರಪ್ಪನವರೆ, ಸಂಜೆ ಆಗುತಾ ಬಂತು. ರಾತ್ರಿ ಇದ್ದು ಬೆಳಗ್ಗೆ ಹೋದರಾಯಿತು. ಒಂದು ದಿನ ಪ್ರಯಾಣಮಾಡಿ ಬಂದಿದೀರಿ. ಆಯಾಸ; ಬನ್ನಿ ಒಳಗೆ" ಎಂದು ಕರೆದರು. ಸೂರಪ್ಪ "ಅದೆಲ್ಲ ಆಗದು. ನಾನು ಹೊರಡಬೇಕು.... ಮಾತಿಗೆ ತಪ್ಪುವ ಮಂಕನಲ್ಲ; ಹಿಂದೆಯೇ ನಿಮ್ಮ ಮನೆಮೆಟ್ಟಲುಗಲ್ಲು ಹತ್ತುವುದಿಲ್ಲ, ಒಂದು ಲೋಟ ನೀರು ಕುಡಿಯುವುದಿಲ್ಲ, ಎಂದುಬಿಟ್ಟಿದೇನೆ. ಲಚುಮಾ, ತಡಿ ಝಾಡಿಸಿ ಹಾಸೊ" ಎಂದ. ಗೋವಿಂದ ರಾಯರಿಂದ ಮರುಮಾತು ಹೊರಡಲಿಲ್ಲ. ಪಂಚಾಂಗ ಮುಚ್ಚಿಕೊಂಡು ಜಗಲಿಯ ಕಂಬಕ್ಕೊರಗಿ ಸುಮ್ಮನೆ ನಿಂತಿದ್ದರು.

ಸೂರಪ್ಪ ಗಾಡಿ ಹತ್ತೇಬಿಟ್ಟ. ಆಮೇಲೆ ಸೊಸೆಯನ್ನು "ಏ ಸೀತಾ!" ಎಂದು ಕರೆದ. ಒಳಗೆ ಹೋಗಿದ್ದ ಸೀತಮ್ಮ ತನ್ನ ಎರಡು ವರುಷದ ಮಗುವನ್ನೆತ್ತಿಕೊಂಡು ಗಾಡಿಯ ಹಿಂದೆ ಬಂದಳು. "ಹೇಳಿದ್ದೆಲ್ಲ ಜ್ಞಾಪಕವಿದೆಯಲ್ಲ. ನಾನು ಕಾಗದ ಬರೆದ ಮೇಲೇ ನೀನು ಹೊರಟು ಬಾ. ಹೇಳದೆ ಕೇಳದೆ ಬಂದುಬಿಡಬೇಡ" ಸೂರಪ್ಪ ಎಂದ. ಗಾಡಿ ಹೊರಟಿತು. ಸೀತಮ್ಮ "ಆಗಲಿ" ಎಂದು ಮನೆಯ ಕಡೆ ತಿರುಗಿದಳು. ಸೂರಪ್ಪ ಮತ್ತೆ ಕಿರಿಚಿ "ರೈಲುತಂಬಿಗೆ ಮರೆತೀಯ. ಜೋಪಾನವಾಗಿ ತೆಗೆದುಕೊಂಡು ಬಾ" ಎಂದ.

ಸೀತಮ್ಮ ಮನೆಯ ಮೆಟ್ಟಲು ಹತ್ತಿದಳು. ತಂದೆ ತನ್ನನ್ನು ತಲೆಯೆತ್ತಿ ಸಹ ನೋಡಲಿಲ್ಲ. ಜಗಲಿಯ ಮೇಲೆ ನಿಂತಿದ್ದ ಎರಡು ಮೊಮ್ಮಕ್ಕಳನ್ನು ಮಾತ್ರ ಆಗಾಗ ನೋಡುತ್ತಿದ್ದ. ಪುನಃ ಪಂಚಾಂಗದ ಕಡೆ ಗಮನ. ಹದಿಮೂರು ವರುಷದ ಹಿರಿಯ ಮೊಮ್ಮಗಳು ಲಲಿತ ನಿಂತಿದ್ದಳು. ಒಂಬತ್ತು ವರುಷದ ಕಿರಿಯ ಮೊಮ್ಮಗಳು ಶಾರದ ನಿಂತಿದ್ದಳು. ಸೂರಪ್ಪನ ಗಾಡಿ ಮರೆಯಾಗುವವರೆಗೂ ಹುಡುಗರು ಜಗಲಿಯ

ಮೇಲೇ ಇದ್ದರು. ಶಾರದೆಗೆ ತಾತನನ್ನು ಮಾತಾಡಿಸಬೇಕೆಂಬಾಸೆ. " ತಾತ, ಸೂರಪ್ಪಜ್ಜ ಹೊರಟು ಹೋದದ್ದೆ ಒಳ್ಳೆಯದಾಯಿತು. ಅವನು ಯಾವಾಗಲೂ ಬಯ್ಯುತ್ತಾನೆ · ಸುಬ್ಬುಮಾವ ಎಲ್ಲಿ ತಾತ? '' ಎಂದು ಕೇಳಿದಳು. ತಾತ ಉತ್ತರ ಕೊಡಲೇ ಇಲ್ಲ. ಪಂಚಾಂಗ ನೋಡುವು ದರಲ್ಲಿಯೇ ತಲ್ಲೀನನಾದಂತೆ ಸುಮ್ಮನಿದ್ದ. ಲಲಿತ ಒಳಗೆ ಹೋದಳು. ಪಾರ್ವತಮ್ಮ ಕಸೂತಿ ಬಿಟ್ಟು ಏಳಲೇ ಇಲ್ಲ. ಅಡುಗೆಯ ಸೂರು, ಹಾಸಿಗೆ ಗಂಟುಗಳನ್ನು ಒಳಗೆ ಹಾಕಿ " ಕುಳಿತುಕೊಳ್ಳೀಮ್ಮಾ " ಎನ್ನುತ್ತೆ ಮೂಲೆಯಲ್ಲಿ ನಿಲ್ಲಿಸಿದ್ದ ಚಾಪೆಯನ್ನು ಹಾಸಿದ. ಸೀತಮ್ಮನಿಗೆ ತುಂಬ ಆಯಾಸವಾಗಿತ್ತು. ದಿನವೆಲ್ಲಾ ಗಾಡಿಯ ಪ್ರಯಾಣ ಮಾಡಿ ಮೈಕೈ ಎಲ್ಲ ನೋವು ಹಿಡಿದಿತ್ತು. ಚಾಪೆಯ ಮೇಲೆ ಮಗುವನ್ನು ಕುಳ್ಳಿರಿಸಿ ಕೊಂಡು ಕುಳಿತಳು. ಸೂರು " ಸೀತಮ್ಮನವರಿಗೆ ಪಾನಕ ಮಾಡಿ ತಂದು ಕೊಡಲೇ ಅಮ್ಮಾ " ಎಂದು ಪಾರ್ವತಮ್ಮನವರನ್ನು ನೋಡಿ ಕೇಳಿದ. ಬಣ್ಣಬಣ್ಣದ ಉಲ್ಲನ್ನು ಹರಡಿಕೊಂಡು ಕಸೂತಿಯಲ್ಲಿಯೇ ಕಲಸಿ ಹೋಗಿದ್ದ ಪಾರ್ವತಮ್ಮ " ನಿಂಬೆಹಣ್ಣಿಲ್ಲ. ಇರುವ ಒಂದು ಹಣ್ಣು ಸಂಜೆ ನನಗೆ ಮಜ್ಜಿಗೆಗೆ ಬೇಕು. ಇವೊತ್ತು ಮಜ್ಜಿಗೆ ತುಂಬ ಸಿಹಿ " ಎಂದಳು ; ತಲೆಯೆತ್ತಿ ನೋಡಲಿಲ್ಲ,

ಬಣ್ಣಬಣ್ಣದ ಉಲ್ಲನ್ನು ಸೀತಮ್ಮನ ಎರಡು ವರುಷದ ಮಗುವಿನ ಕಣ್ಣಿಗೆ ಬಿತ್ತು. ತಾಯಿಯ ಕೈಯಿಂದ ನುಸುಳಿಕೊಂಡು ಒಂದು ಕ್ಷಣ ದೊಳಗಾಗಿ ಪಾರ್ವತಮ್ಮನೆಡೆ ಇದ್ದ ಉಲ್ಲನ್ನಿನ ಉಂಡೆಗಳನ್ನು ಎರಚಾ ಡಿತು ; ಮೂಲೆಮೂಲೆಗೊಂದು ಉರುಳಿ ಓಡಿದುವು ; ಸುತ್ತು ಬಿಚ್ಚಿ ಕೊಂಡುವು.

ಪಾರ್ವತಮ್ಮನಿಗೆ ತುಂಬ ಸಿಟ್ಟು ಬಂತು. " ಥೂ, ಇದೊಂದು ಬಂತು. ನಡಿ. ಸೀತಕ್ಕಾ, ನೋಡುತಾ ಕುಳಿತಿದೀಯಲ್ಲ ! ಮಗು ಮಾಡಿದ್ದೆಲ್ಲಾ ಚೆನ್ನವೇನು ? ಹೇಳಿಕೊಟ್ಟು ಮಾಡಿಸುತೀ ಅಂತ ಕಾಣು ತದೆ. ತಿಳಿದುತಿಳಿದೂ ಮಗುವನ್ನು ಬಿಟ್ಟುಬಿಟ್ಟಿದೀಯಲ್ಲ. ಕರೆದುಕೊ, ಸುಡುಗಾಡು ! '' ಎಂದು ಮಗುವಿನ ಕೈ ಕೊಸರಿದಳು. ಮಗು ಹಿಂದಕ್ಕೆ ಬಿತ್ತು. ತಾಯಿ ಓಡಿ ಬಂದು ಎತ್ತಿಕೊಂಡಳು.

೫

ಸೀತಮ್ಮ ತವರೂರಿಗೆ ಬಂದು ಹನ್ನೆರಡು ದಿನಗಳಾದುವು. ಮಾವನ ಮನೆಯಲ್ಲಿ ಅತ್ತೆ; ತವರುಮನೆಯಲ್ಲಿ ಮಲತಾಯಿ. ಹನ್ನೆರಡ ನೆಯ ದಿನ ಎಂದು ಬಂದೀತಪ್ಪಾ, ಎನಿಸಿಬಿಟ್ಟಿತ್ತು ಸೀತಮ್ಮನಿಗೆ. ಬೆಳ ಗಾದರೆ ಜಗಳ. ಮೊಮ್ಮಕ್ಕಳ ಮೇಲೆ ಪ್ರಹಾರ. ಹೆತ್ತ ತಾಯಿ ತಡೆಯ ಲಾರದೆ ಒಂದೆರಡು ಮಾತು ಅನ್ನುತ್ತಿದ್ದಳು. ಸರಿ, ಪಾರ್ವತಮ್ಮ ಗಂಡನ ಹತ್ತಿರ ಹೋಗಿ ಒಂದಕ್ಕೆ ಎರಡು ಊದಿಬಿಡುತ್ತಿದ್ದಳು. ಗಂಡ, ಹೆಂಡತಿಗೆ ಹೆದರಿ ಮಗಳನ್ನು ತುಂಬ ಬಯ್ಯುತ್ತಿದ್ದ.

ತಮ್ಮ ಸುಬ್ಬಣ್ಣನಂತೂ ಅಕ್ಕನನ್ನು ತಲೆಯೆತ್ತಿ ನೋಡುತ್ತಿರಲಿಲ್ಲ. ಅವನು ಹೆಚ್ಚು ಕಾಲ ಮನೆಯಲ್ಲಿಯೇ ಇರುತ್ತಿರಲಿಲ್ಲ. ಅಗಸನ ಮನೆ ಯಿಂದ ಬಂದ ಆತನ ಅಂಗಿಯ ಮೇಲೆ ಸೀತಮ್ಮನ ಅರಿಯದ ಮಗು ಒಂದು ದಿನ ಕಾಲಿಟ್ಟಿತು. ಸುಬ್ಬಣ್ಣನಿಗೆ ಎಂದೂ ಬಾರದ ಕೋಪ ಬಂದು, ಆ ಎಳೆಯ ಮಗುವನ್ನು ತುಂಬ ಹೊಡೆದುಬಿಟ್ಟ. ಮಗುವಿಗೆ ಉಸಿರು ಕಟ್ಟಿತು. ಹಿತ್ತಲಲ್ಲಿದ್ದ ಸೀತಮ್ಮ ಬೇಗ ಬಂದು ಮಗುವನ್ನೆತ್ತಿಕೊಂಡಳು. ಅಂದು ಅಮಾವಾಸ್ಯೆಯ ಹತ್ತಿರದ ದಿನ ಬೇರೆ; ತುಂಬ ಹೆದರಿಕೆಯಾ ಯಿತು. ತಮ್ಮನ ಮೇಲೆ ಬಹಳ ಸಿಟ್ಟು ಬಂತು. ರೇಗಿದಳು.

ತಮ್ಮ "ನೀನು ಯಾರೇ ನನ್ನ ಕೇಳುವವಳು? ಇದು ನಿನ್ನ ಮನೆ ಯಲ್ಲ. ನೀನು ಯಾರ ಮನೆಗೆ ಬಂದಿದೀಯ ಎನ್ನುವುದನ್ನು ನೆನಸಿ ಕೊಂಡು ಮಾತಾಡು. ನಾನು ಮನೆಯ ಯಜಮಾನ. ನನ್ನ ಮನೆಗೆ ನೀನು ಬಂದಿದೀಯ. ನಾನು ಹೆಚ್ಚು....ನನ್ನ ಅಂಗಿಯನ್ನು ತುಳಿಯು ವುದಕ್ಕೆ ಬಿಟ್ಟಿದೀಯಲ್ಲ, ಮಗುವನ್ನು! ನಿನ್ನ ಮಗುವನ್ನು ನೀನು ನೋಡಿ ಕೊಳ್ಳುವುದಕ್ಕಾಗುವುದಿಲ್ಲವೇನು?" ಎಂದ.

"ಯಾರಾದರೂ ಹೆಚ್ಚಿರಲಿ, ಸುಬ್ಬಣ್ಣ. ಮಗುವಿನ ಜೀವ ಹೋದೀತಲ್ಲಾ ಎಂದು ಓಡಿಬಂದೆ. ಒಂದು ಸಂಸಾರದಲ್ಲಿ ಯಾರು ತಾನೇ ಹೆಚ್ಚು, ಯಾರು ತಾನೇ ಕಡಮೆ? ದೇವರು ಅಂಥ ಪಕ್ಷಪಾತಿ ಯಲ್ಲ. ಎಲ್ಲರಿಗೂ ಒಂದೇ ಮಟ್ಟದ ಅಧಿಕಾರ ಕೊಟ್ಟಿದಾನೆ. ನಾನು ಹೆಚ್ಚು ಎಂದುಕೊಂಡು ಏಕೆ ಅವಿವೇಕತನ ತೋರಿಸುತೀಯೆ"

"ನೀನು ಮಹಾ ವಿವೇಕಿ. ವೇದಾಂತ ಶುರುಮಾಡಿಬಿಟ್ಟಳು.

ನಿನ್ನ ಮುಂದೆ ನಾರಾಯಣದಾಸರ ಹರಿಕಥೆ ತಂದು ನಿವಾಳಿಸಬೇಕು. ಅತ್ತೆಯು ಮನೆಯಲ್ಲಿರುವಾಗ ಎಲ್ಲೊ ಅಜೀರ್ಣವಾಗುವಷ್ಟು ಪುರಾಣ ಕೇಳಿಬಿಟ್ಟಿದ್ದಾಳೆ. ಆದುದರಿಂದ ಹೀಗೆಲ್ಲ, ಮಾತಾಡುತಾಳೆ. ಸಾಕು, ಸುಮ್ಮನಿರು. ಗಂಡುಮಕ್ಕಳು ಹೆಣ್ಣು ಮಕ್ಕಳಿಗಿಂತ ಹೆಚ್ಚು, ಎನ್ನು ವುದು ಪ್ರಪಂಚಕ್ಕೇ ತಿಳಿದಿದೆ.''

ಮಗುವನ್ನೆತ್ತಿಕೊಂಡು ಸಮಾಧಾನದಿಂದ "ನಾನೇನು ಪುರಾಣ ಹೇಳುವುದಕ್ಕೆ ಬರಲಿಲ್ಲ ಸುಬ್ಬಣ್ಣ. ನಾನು ಪುರಾಣ ಕೇಳಿಯೇ ಇಲ್ಲ. ನನ್ನದೇ ಒಂದು ಪುರಾಣ. ನೀನು ಹೇಳಿದೆಯಲ್ಲ—ಈ ಸಂಸಾರದಲ್ಲಿ- ನಾನೇ ಹೆಚ್ಚು, ಎಲ್ಲ ನನ್ನದು ಎಂದು. ಅದನ್ನು ಕೇಳಿ ದುಃಖವಾಯಿತು. ಆದುದರಿಂದ ನನಗೆ ತಿಳಿದ ಒಂದೆರಡು ಮಾತು ಹೇಳಲು ಬಯಸಿದೆ. ಒಂದು ಹಳೆಯ ಮನೆ ಇತ್ತಂತೆ. ಮನೆಯಲ್ಲಿ ಯಾರೂ ಇರಲಿಲ್ಲವಂತೆ. ಮನೆಯ ಹೆಂಚುಗಳು ನಿನ್ನ ಹಾಗೆ ಜಂಬದಿಂದ 'ನಮ್ಮಿಂದ ಈ ಮನೆ ಇಷ್ಟು ದಿನ ಉಳಿದಿದೆ. ನಾವು ಹೆಚ್ಚು' ಎಂದುವು. ಅವುಗಳ ಕೆಳಗಿನ ಸರಗಳಿಗೆ ಸಿಟ್ಟು ಬಂತು. 'ನಾವಿಲ್ಲದಿದ್ದರೆ ನೀವೆಲ್ಲಿ ಹೀಗೆ ನಿಲ್ಲುತೀರಿ? ನಾವು ಹೆಚ್ಚು' ಎಂದು ಅವು ಹೇಳಿದುವು. ಸರಗಳ ಜಂಬ ನೋಡಿ ಅವುಗಳ ಕೆಳಗಿದ್ದ ತೊಲೆಗಳು 'ನಾವಿಲ್ಲದಿದ್ದರೆ ಸರಗಳೆಲ್ಲಿ! ಹೆಂಚೆಲ್ಲಿ! ನಾವೇ ಹೆಚ್ಚು' ಎಂದುವು. ತೊಲೆಗಳ ಕೆಳಗಿದ್ದ ಕಂಬಗಳು ಇದನ್ನು ನೋಡಿದುವು. 'ನಾವಿಲ್ಲದಿದ್ದರೆ ತೊಲೆಗಳೆಲ್ಲಿ ಸರವೆತ್ತ? ಹೆಂಚಿನ ಗತಿ ಯೇನು ನಾವೇ ನಿಮಗಿಂತ ಹೆಚ್ಚು!' ಎಂದು ಕೂಗಿದುವು. ಇದನ್ನೆಲ್ಲ ನೋಡುತಿದ್ದ ಗೋಡೆಗಳು ಸುಮ್ಮನೆ ಮಗುಚಿಕೊಂಡುವು. ಮನೆ ಮಾಯವಾಯಿತು. ಏಕೆ ಜಂಬದಿಂದ ನಾನು ಹೆಚ್ಚು, ನಾನು ಹೆಚ್ಚು, ಎಂದು ಸುಮ್ಮನೆ ಹೇಳುತೀಯೆ. ಈ ಸಂಸಾರವೂ ಅಂಥದೊಂದು ಮನೆ. ಈ ಮನೆಯಲ್ಲಿ ಯಾರು ಹೆಚ್ಚೋ, ಯಾರು ಕಡಮೆಯೋ, ಆ ದೇವರಿಗೆ ಗೊತ್ತು. ಮನೆಯಲ್ಲಿ ಮಕ್ಕಳೂ ಇರಬೇಕು. ಅವುಗಳೂ ಸಂಸಾರದ ಒಂದಂಗ. ಮಕ್ಕಳನ್ನು ಕಾಣದ ನಿನಗೆ ಈ ಹುಡುಗರ ಮೇಲೇಕಿಷ್ಟು ಕೋಪ? ಅವು ನಿನ್ನ ಅಕ್ಕನ ಮಕ್ಕಳಲ್ಲವೇನು? ನನಗೆ ನೀನೊಬ್ಬನೇ ಮುಂದಿನ ತವರು. ನೀನೇ ಹೀಗೆ ಮಾಡಿದರೆ ನನ್ನ ಗತಿಯೇನು ಸುಬ್ಬು? ನಾನು ಹೀಗೆಲ್ಲ ಹೇಳಿದೆ, ಎಂದು ಮನಸ್ಸಿಗೆ ಏನೂ ತಿಳಿದು ಕೊಳ್ಳಬೇಡ. ನಿನ್ನ ಅಕ್ಕನ ಮೇಲೆ ಸ್ವಲ್ಪ ಕರುಣೆ ಇರಲಪ್ಪ. ಅಮ್ಮ

ಹೋಗುವಾಗ ಕೂಡ, ಇಬ್ಬರೂ ಹೊಂದಿಕೊಂಡಿರಿ. ಸುಬ್ಬಣ್ಣನ ರೋಗ ಬೇಗ ಹೋಗಲೆಂದು ದೇವರನ್ನು ಪ್ರಾರ್ಥಿಸಿಕೊಳ್ಳಮ್ಮ. ಅವನು ಒಳ್ಳೆಯವನಾಗಿ ಬಾಳಲಿ. ನಿನಗೆ ಅವನು ತಮ್ಮ; ಅವನಿಗೆ ನೀನು ಅಕ್ಕ. ದೊಡ್ಡವರಾದ ಮೇಲೆ ಇನ್ನೊಂದು ಬಳಗ ನಿಮಗಿಲ್ಲ, ಎಂದು ಕೈಕೈ ಹಿಡಿದು ನನಗೆ ಹೇಳಿದಳು. ನಿನಗೆ ಅದೆಲ್ಲ ನೆನಪಿಲ್ಲವೆ?'' ಎಂದಳು.

ಸುಬ್ಬಣ್ಣ ಬಟ್ಟೆ ಹಾಕಿಕೊಳ್ಳುತ್ತ ಎಲ್ಲವನ್ನೂ ಕೇಳಿದ. ಅವನ ಮುಖ ಚಿಕ್ಕದಾಗಿತ್ತು; ಕೆಂಪೇರಿತ್ತು. ಕಣ್ಣುಗಳಲ್ಲಿ ನೀರೂರಿತ್ತು. ಸುಮ್ಮನೆ ಹೊರಗೆ ಹೊರಟುಹೋದ.

ಹದಿಮೂರನೆಯ ದಿನ ಬಂತು. ಒಳಗಿನಿಂದ ಪಾರ್ವತಮ್ಮ "ಸೀತಕ್ಕ ಬಾ ಇಲ್ಲಿ" ಎಂದು ಕರೆದಳು. "ಸೂರು ನಮ್ಮ ಜೊತೆಗೆ ಬರುತಾನೆ. ಆದುದರಿಂದ ನಿನಗೆ, ನಿನ್ನ ಮಕ್ಕಳಿಗೆ ಎಂಟು ದಿನಕ್ಕಾಗು ವಷ್ಟು ಅಕ್ಕಿ, ಬೇಳೆ–ಇತರ ಸಾಮಾನುಗಳನ್ನು ಆ ಗೂಡಿನಲ್ಲಿ ತೆಗೆದಿಡಿಸಿ ದೇನೆ. ಹಿತ್ತಲಲ್ಲಿರುವ ಪಡವಲಕಾಯಿ ಕೀಳಬೇಡಿ; ಕುಂಬಳಕಾಯಿ ಇನ್ನೂ ಎಳೆಯದು. ಸೊಪ್ಪು ಇನ್ನೂ ಎರಡು ದಿನ ಇರಬೇಕು, ಮೆಣಸಿನಕಾಯಿಯನ್ನು ಬೀಜಕ್ಕೆ ಬಿಟ್ಟಿದೆ. ಆದುದರಿಂದ ತೋಟದಲ್ಲೇನೂ ಕೀಳಬೇಡಿ. ನಮ್ಮ ಕೋಣೆಗೆ ಬೀಗ ಹಾಕಿಕೊಂಡಿರುತೇವೆ. ಪಡಸಾಲೆ ಯಲ್ಲಿ ಮಲಗಿಕೊಳ್ಳಿ. ಹಿತ್ತಲ ಬಾಗಿಲು ಜೋಪಾನ. ಹನುಮಣ್ಣ ಬಂದು ಮಲಗುತಾನೆ. ಹುಷಾರಾಗಿರಿ'' ಎಂದು ಹೇಳಬೇಕಾದ ಎಲ್ಲ ವಿಷಯಗಳನ್ನೂ ಹೇಳಿ, ಊರಿಗೆ ಹೊರಡಲು ಬಟ್ಟೆಬರೆ ಹಾಕಿ ಸಿದ್ಧ ಪಡಿಸಿದ ತನ್ನ ಪೆಟ್ಟಿಗೆಯ ಬಾಗಿಲನ್ನು ಹಾಕಿದಳು. ಸುಬ್ಬಣ್ಣ ದರ್ಜಿಯ ಅಂಗಡಿಯಿಂದ ತನ್ನ, ತನ್ನ ತಂದೆಯ ಮತ್ತು ಪಾರ್ವತಮ್ಮನ ಬಟ್ಟೆ ಗಳನ್ನು ತೆಗೆದುಕೊಂಡು ಬಂದ. ಗೋವಿಂದರಾಯರು ಗಾಡಿ ತೆಗೆಸಿಕೊಂಡು ಬಂದರು. ಶುಭಕಾರ್ಯಕ್ಕೆ ಹೊರಡುವ ದಿನವಾದುದರಿಂದ ಅಡುಗೆಯ ವನು ಒಂದು ಪಲ್ಯ, ಪಾಯಸ, ಚಿತ್ರಾನ್ನ ಮಾಡಿದ್ದ. ಎಲ್ಲರ ಊಟವೂ ಆಯಿತು. ಸೂರು, ನರಸಿಂಹ ಜೋಯಿಸರ ಸಾಮಾನಿನೊಂದಿಗೆ ಅವ ರೊಡನೆ ಬಂದ. ಸೀತಮ್ಮನ ಮದುವೆ ಮಾಡಿಸಿದ ಪುರೋಹಿತರೂ ಅವರೆ. ಗಾಡಿ ಬಾಗಿಲ ಮುಂದೆ ನಿಂತಿತ್ತು. ಗೋವಿಂದರಾಯರು ಬಟ್ಟೆ ಹಾಕಿಕೊಂಡು ಮಗನೊಡನೆ ಸಿದ್ಧವಾಗಿದ್ದರು. ಮನೆಯ ಮುಂದೆ

ಎರಡು ಗಳು ನೆಟ್ಟು, ಮಾವಿನ ಟೊಂಗೆ ಸಿಕ್ಕಿಸಿದ್ದರು. ಸಾಮಾನು ಗಳನ್ನೆಲ್ಲ ಹನುಮಣ್ಣ ಗಾಡಿಯಲ್ಲಿರಿಸಿದ.

ಬೀದಿಯುವರೆಲ್ಲ ನಿಂತು ನೋಡುತ್ತಿದ್ದರು. ಅಕ್ಕಪಕ್ಕದ ಮನೆಯುವ ರೆಲ್ಲ ನಿಂತಿದ್ದರು. ಪಾರ್ವತಮ್ಮ ಗಾಡಿ ಹತ್ತುತ್ತ "ಭಾನುವಾರ ಬಂದು ಬಿಡುತೇವೆ. ಮನೆಯು ಕಡೆ ಜೋಪಾನ. ಏನೂ ಸಾಲ ಮಾಡಬೇಡಿ" ಎಂದಳು. ಗೋವಿಂದರಾಯರೂ ಕುಳಿತರು. ಆಮೇಲೆ ಜೋಯಿಸರು ಹತ್ತಿದರು. ಸುಬ್ಬಣ್ಣ ಸ್ನೇಹಿತರೊಂದಿಗೆ ಮಾತಾಡುತ್ತ ನಿಂತಿದ್ದ. ಗೆಳೆಯರೆಲ್ಲ ಆನಂದದಿಂದ ಬೀಳ್ಕೊಟ್ಟರು. ಅವನೂ ಹತ್ತಿದ. ಗಾಡಿ ಮುಂದೆ ಹೊರಟಿತು.

ಲಲಿತ, ಶಾರದ ಗಾಡಿಯ ಹತ್ತಿರವೇ ಬಹಳ ಹೊತ್ತು ನಿಂತಿದ್ದರು. ಲಲಿತೆಗೆ ಸುಬ್ಬಣ್ಣನ ಮದುವೆ ನೋಡಬೇಕೆಂಬಾಸೆ. ಆದರೆ ಏನು ಮಾಡಿಯಾಳು. ಎಷ್ಟೋಬಾರಿ ತಾತನನ್ನು ಕೇಳಿದಳು. ತಾತ ಉತ್ತರ ವನ್ನೇ ಕೊಡಲಿಲ್ಲ. ತಾಯಿ "ಬೇಡಮ್ಮ, ಅವರಿಗೆ ಇಷ್ಟವಿಲ್ಲ. ಅವರ ಮನಸ್ಸನ್ನೇಕೆ ನೋಯಿಸಬೇಕು, ದೇವರು ಎಲ್ಲಿಟ್ಟರೆ ಅಲ್ಲಿರಬೇಕು. ಹಾಗೆಲ್ಲ ಹಠ ಮಾಡಬಾರದು" ಎಂದಳು. ಗಾಡಿ ದೂರ ಹೋಗುವ ವರೆಗೂ ಹುಡುಗರು ಕದಲದೆ ನಿಂತು, ಅದನ್ನೇ ನೋಡುತ್ತಿದ್ದರು. ಮಗುವ ನ್ನೆತ್ತಿಕೊಂಡು ಸೀತಮ್ಮ ಮೆಟ್ಟಲುಕಲ್ಲಮೇಲೆ ಸುಮ್ಮನೆ ನಿಂತಿದ್ದಳು. ಮನಸ್ಸಿಗೆ ತುಂಬ ನೋವಾಗುತ್ತಿತ್ತು. "ಲಲಿತಾ, ಶಾರದಾ" ಎಂದು ಕೂಗಿ ಒಳಗೆ ಹೋದಳು.

ಬೀದಿಯಲ್ಲಿ ನಿಂತಿದ್ದವರೆಲ್ಲ ಈ ದೃಶ್ಯವನ್ನು ನೋಡಿದರು. "ಹೆಣ್ಣು ಮಗಳೊಬ್ಬಳಿದಾಳೆ. ಅಪರೂಪಕ್ಕೆ ತವರುಮನೆಗೆ ಬಂದಿದಾಳೆ. ಇರುವ ಒಬ್ಬ ಮಗನ ಮದುವೆ. ಆಕೆಯೂ ನೋಡಬಾರದೆ? ಸಂತೋಷ ಪಡಬಾರದೆ? ಆಕೆಯ ಮಕ್ಕಳನ್ನಾದರೂ ಕರೆದುಕೊಂಡು ಹೋಗ ಬಾರದೆ? ಇವರಿಗೇನು ಬಂದಿದೆ, ಥಾಡಿ! ಎಂಥ ತಂದೆತಾಯಿಗಳಪ್ಪ, ಥೂ!" ಎಂದುಕೊಂಡು ಕೆಲವರು ನಡೆದರು.

ಚಿನ್ನದ ಕಟ್ಟೆಯಿಂದ ಮೂರು ಮೈಲಿ ಗಾಡಿಯಲ್ಲಿ ಹೋದರೆ ಸಿದ್ಧಾಪುರದ ಬಸ್ಸಿನ ದಾರಿ ಸಿಕ್ಕುತ್ತದೆ. ಆ ಊರಿನವರು ಬೇರೆ ಊರಿಗೆ ಹೋಗಬೇಕಾದರೆ ಗಂಡಾಂತರ. ಊರೊಳಗಿಂದ ಬಸ್ಸು ಹೊರಡುವುದಿಲ್ಲ; ರೈಲು ಮೊದಲೇ ಇಲ್ಲ. ಊರು ಬಿಟ್ಟು ಮೂರು ಮೈಲಿ ಹೋದರೆ

ಸುತ್ತ ಸೊಗಸಾದ ಕಾಡು. ಅಲ್ಲಿ ಹಾದಿಯ ಕಟ್ಟೆಯಮೇಲೆ ಕುಳಿತು, ಸಿದ್ಧಾಪುರದ ಬಸ್ಸಿಗಾಗಿ ಕಾಯುತ್ತಿರಬೇಕು. ಆ ಬಸ್ಸೊ ಕಾಲಕ್ಕೆ ಸರಿಯಾಗಿ ಬರುತ್ತಿರಲಿಲ್ಲ. ಆದುದರಿಂದ ಅದು ಬರುವ ವೇಳೆ ಸಂಜೆ ಐದು ಗಂಟೆಯೆಂದು ಗೊತ್ತಿದ್ದರೂ ಗೋವಿಂದರಾಯರ ಗಾಡಿ ಎರಡು ಗಂಟೆಗೇ ಊರುಬಿಟ್ಟಿತು.

ಬಸ್ಸು ಹೋದನಂತರ ಹನುಮಣ್ಣ ಗಾಡಿಯನ್ನು ಊರಿಗೆ ಹೊಡೆದುಕೊಂಡು ಬಂದ. ಆಗ ರಾತ್ರಿ ಎಂಟು ಗಂಟೆಯಾಗಿತ್ತು. ಸೀತಮ್ಮ ಅನ್ನಕ್ಕಿಟ್ಟಿದ್ದಳು. ಗಾಡಿ ಬಂದಕೂಡಲೆ "ಬಸ್ಸು ಎಷ್ಟು ಹೊತ್ತಿಗೆ ಬಂದಿತು, ಹನುಮಣ್ಣ? ಎಲ್ಲರಿಗೂ ಅನುಕೂಲವಾಗಿ ಜಾಗ ಸಿಕ್ಕಿತೇ? ಈಗ ಇಲ್ಲಿಯೇ ಊಟಮಾಡು. ಇಷ್ಟು ಹೊತ್ತಿನ ಮೇಲೆ ಹಳ್ಳಿಗೆ ಹೋಗಿಬರುವುದು ಬೇಡ. ಒಳಗೆ ಬಾ, ದಣಿವಾರಿಸಿಕೊ" ಎಂದಳು.

ಹನುಮಣ್ಣ ಎತ್ತು ಬಿಚ್ಚಿ ಗೂಟಕ್ಕೆ ಕಟ್ಟಿ, ಹಿಡಿಹುಲ್ಲು ಮುಂದೆ ಹಾಕಿ, ಗಾಡಿಗೆ ಕಟ್ಟಿದ್ದ ಲಾಂದ್ರದೊಡನೆ ಒಳಗೆ ಬಂದ. ಬೀದಿಯ ಬಾಗಿಲೊಳಗೆ ದೀಪವನ್ನಿಟ್ಟುಕೊಂಡು, ತಲೆಯ ಮೇಲಿದ್ದ ರುಮಾಲು ತೆಗೆಯುತ್ತ "ಏನು ಜನವೋಪ್ಪ! ಪಾರ್ವತಮ್ಮನವರ ಗುಣ ನನಗಿಷ್ಟು ಸರಿಬೀಳುವುದಿಲ್ಲ ತಾಯಿ. ಸ್ವಲ್ಪ ನೀರು ಹಾಕಿ, ಬಾಯಾರಿಕೆ" ಎಂದು ಮೇಲಕ್ಕೆದ್ದ. ಲಲಿತ ತಂಬಿಗೆಯಲ್ಲಿ ನೀರು ತಂದಿಟ್ಟಳು. ಹನುಮಣ್ಣ ಹೊರಗೆ ಹೋಗಿ ಕೈಕಾಲು ಮುಖ ತೊಳೆದು, ಬಾಯಾರಿಕೆ ತೀರಿಸಿಕೊಂಡು ಒಳಗೆ ಬಂದು ಕುಳಿತ. ಸೀತಮ್ಮ ಮಕ್ಕಳ ಹಾಸಿಗೆ ಹಾಸುತ್ತಿದ್ದಳು. ಲಲಿತ ಅಳುತ್ತಿದ್ದ ಮಗುವನ್ನು ಸಮಾಧಾನಪಡಿಸುತ್ತಿದ್ದಳು. ನೀಳವಾದ ನಿಟ್ಟುಸಿರೊಂದನ್ನು ಬಿಟ್ಟು ಹನುಮಣ್ಣ "ತಾಯಿಾ, ಅಂಗಡಿ ಬೀದಿಯ ಕಡೆ ಹೋಗಿ ಬರುತೇನೆ" ಎಂದುಕೊಂಡು ಹೊರಟುಹೋದ.

ಊರಿನ ಜನಸಂಖ್ಯೆ ಎರಡು ಸಾವಿರವಿರಬಹುದು. ಊರು ಅಚ್ಚುಕಟ್ಟಾಗಿದೆ. ದೊಡ್ಡ ದೊಡ್ಡ ಮನೆಗಳೇ ಮುನ್ನೂರಿವೆ. ಅಂಗಡಿಬೀದಿಯಲ್ಲಿ ಹದಿನೇಳು ಅಂಗಡಿಗಳಿವೆ. ಊರನಡುವೆ ಆಂಜನೇಯ ದೇವಸ್ಥಾನ. ಬಹಳ ಪುರಾತನದಂತೆ ; ವ್ಯಾಸರಾಯರ ಪ್ರತಿಷ್ಠೆಯಂತೆ. ಊರಿನಲ್ಲಿ ಎಲ್ಲಿ ನಿಂತು ನೋಡಿದರೂ ಅದರ ಎತ್ತರವಾದ ಗೋಪುರ ಕಾಣಿಸುತ್ತದೆ. ಊರಿನಾಚೆ ಮುಕ್ಕಾಲು ಮೈಲಿ ದೂರದಲ್ಲಿ ದೊಡ್ಡ ಕೋಟೆಯ ಒಂದು

ಭಾಗ ಅರೆಮುರಿದು ಬಿದ್ದಿದೆ  ಮೊದಲಿಗೆ ಅದು ಈ ಊರಿನ ಗಡಿಯಾಗಿ ತ್ತಂತೆ. ಚಿನ್ನದಕಟ್ಟೆ ನಿಜವಾಗಿಯೂ ಚಿನ್ನದ ಕಟ್ಟೆಯೇ ಆಗಿತ್ತು. ಜನರೆಲ್ಲ ತುಂಬ ಸುಖದಿಂದಿದ್ದರು ಕೆಲವು ಮನೆಗಳ ಸಾಲು, ಅಂದಿನ ಮನೆತನಗಳು ಇನ್ನೂ ಉಳಿದಿವೆ. ಗೋವಿಂದರಾಯರ ಮುತ್ತಾತಂದಿರು ಮೂರು ವರುಷ ಅಲ್ಲಿಯ ಮಂತ್ರಿಗಳಾಗಿದ್ದರಂತೆ.

ಗೋವಿಂದರಾಯರ ಮನೆಯ ಪಕ್ಕದಲ್ಲಿ ಒಬ್ಬ ವಿಧವೆ ಜೀವಿಸಿದ್ದಳು. ಆಕೆಯ ಮನೆ ಅವರ ಮನೆಗಿಂತ ಸ್ವಲ್ಪ ಚಿಕ್ಕದು. ಗಂಡ ತೀರಿಕೊಂಡು ಹನ್ನೆರಡು ವರುಷಗಳಾಗಿದ್ದುವು. ಮಕ್ಕಳನ್ನು ಕಂಡರೆ ತುಂಬ ಪ್ರೀತಿ ; ತನಗೆ ಮಕ್ಕಳೇ ಇರಲಿಲ್ಲ. ಆಕೆಗೆ ಸೀತಮ್ಮನ ಕತೆಯೆಲ್ಲ ಗೊತ್ತು ; ಆಕೆ ಹುಟ್ಟಿದ್ದು ಬೆಳೆದದ್ದು ಎಲ್ಲ ತಿಳಿದಿದೆ. ಆಕೆಯ ತಾಯಿಯೂ ಈ ಮುದುಕಿಯೂ ತುಂಬ ಸ್ನೇಹದಿಂದಿದ್ದರಂತೆ. ಮುದುಕಿಗೆ ಗೋವಿಂದರಾಯರ ಇಂದಿನ ಸಂಸಾರದ ಅವಿವೇಕ ನೋಡಿ ಬಹಳ ದುಃಖವಾಯಿತು. ಮನೆಯವರೆಲ್ಲ ಮದುವೆಗೆ ಹೋದ ಮಾರನೆಯ ದಿನವೇ ಸೀತಮ್ಮನನ್ನು " ಮಕ್ಕಳೊಡನೆ ಇನ್ನೆಂಟು ದಿನ ನನ್ನೊಂದಿಗೆ ಸುಖವಾಗಿರಮ್ಮ " ಎಂದು ಕರೆದಳು. ಸೀತಮ್ಮ ಮೊದಲು ಒಪ್ಪಲಿಲ್ಲ. ಸಂಬಂಧಪಡದ ಇನ್ನೊಬ್ಬರಿಗೆ ತೊಂದರೆಕೊಡುವುದು ಸರಿಯಲ್ಲವೆಂಬುದು ಆಕೆಗೆ ಗೊತ್ತು. ಆದರೆ ಮುದುಕಿ ಬಿಡಬೇಕಲ್ಲ ! ಬಲವಂತದಿಂದ ಆಕೆಯನ್ನೊಪ್ಪಿಸಿದಳು. ಅಂದಿನಿಂದ ಎಂಟು ದಿನವೂ ಮುದುಕಿಯ ಮನೆಯಲ್ಲಿಯೇ ಊಟ, ತಿಂಡಿ, ಮಲಗುವುದು. ಮನೆಯ ಬಾಗಿಲಿಗೆ ಬೀಗ ಹಾಕಿಬಿಟ್ಟಳು. ಮಲತಾಯಿ ಕೊಟ್ಟಿದ್ದ ಎಂಟು ದಿನಕ್ಕಾಗುವಷ್ಟು ಅಡುಗೆ ಸಾಮಾನನ್ನು ಹನುಮಣ್ಣನಿಗೆ ಕೊಟ್ಟುಬಿಟ್ಟಳು. ಹನುಮಣ್ಣ ದಿನವೂ ರಾತ್ರಿ ಜಗಲಿಯ ಮೇಲೆ ಕಾವಲಾಗಿ ಮಲಗುತ್ತಿದ್ದ.

ಮುದುಕಿಯ ವಯಸ್ಸು ಐವತ್ತೆಂಟಿರಬಹುದು. ಆದರೂ ಗಟ್ಟಿಮುಟ್ಟಾಗಿದಾಳೆ. ಮನೆಯ ಕೆಲಸವನ್ನೆಲ್ಲ ತಾನೇ ಮಾಡುತ್ತಾಳೆ ಆಕೆಯ ಹೆಸರು ತುಳಸೀಬಾಯಿ, ಮನೆಯನ್ನು ಚೆನ್ನಾಗಿಟ್ಟುಕೊಂಡಿದ್ದಾಳೆ. ಆಕೆಯ ಪಕ್ಕದ ಮನೆಯ ಕಮಲಮ್ಮನವರ ಹಾಗೆ ಸದಾ ಮಲಗಿರದೆ ಏನಾದರೂ ಕೆಲಸ ಹುಡುಕಿಕೊಂಡು ಮಾಡುತ್ತಿರುತ್ತಾಳೆ. ಮನೆಯ ಮುಂದೆ ದೊಡ್ಡ ಹೂದೋಟ ಮಾಡಿದ್ದಾಳೆ. ಮನೆಯ ಹಿಂದೆ, ನಾಲ್ಕು ಮನೆಗೆ ಹಂಚುವಷ್ಟು ತರಕಾರಿ ಬೆಳೆಯುತ್ತಾಳೆ. ಮಕ್ಕಳಿಲ್ಲದುದೊಂದು ಕೊರಗು. ಆದುದರಿಂದ

ಇಬ್ಬರು ವಾರದ ಹುಡುಗರಿಗೆ ಅನ್ನ ಹಾಕುತ್ತಿದ್ದಳು. ಪರಸ್ಥಳದಿಂದ ಬರುವ ಬ್ರಾಹ್ಮಣರಿಗೆ ಇನ್ನೆಲ್ಲಿಯೂ ಅನ್ನದ ಅನುಕೂಲವಿಲ್ಲದಿದ್ದರೆ ತುಳಸೀಬಾಯಿಯ ಛತ್ರ ಸಿದ್ಧ.

ಸೀತಮ್ಮನನ್ನು ಕಂಡರೆ ಮೊದಲಿನಿಂದಲೂ ತುಂಬ ಪ್ರೀತಿ. ಈಗ ತವರಿನಲ್ಲಿಯೂ ಆಕೆಗೆ ಸುಖವಿಲ್ಲದಿರುವುದನ್ನು ಕಂಡು ಇನ್ನೂ ಕನಿಕರ ವಾಯಿತು. ಕರೆದು, ಎಂಟು ದಿನವಾದರೂ ಆಕೆಯನ್ನು ತನ್ನ ಮನೆ ಯಲ್ಲಿ ಸುಖವಾಗಿಟ್ಟುಕೊಂಡಿರಬೇಕೆನ್ನಿಸಿತು.

ಸೀತಮ್ಮ ಮಕ್ಕಳೊಂದಿಗೆ ತನ್ನ ಮನೆಗೆ ಬಂದಾಗ ತುಳಸೀ ಬಾಯಿಗೆ ತುಂಬ ಆನಂದವಾಯಿತು. "ಸೀತಮ್ಮ, ನೀನು ಗರ್ಭಿಣಿ. ಆದುದರಿಂದ ಒಂದು ಕೆಲಸವನ್ನೂ ಮಾಡಕೂಡದು. ಮಾಡಿದರೆ ನಾನು ಊಟವನ್ನೇ ಬಿಟ್ಟುಬಿಡುತ್ತೇನೆ ಎಂದು ಮೊದಲೇ ಹೆದರಿಸಿಬಿಟ್ಟಳು. ಎಲ್ಲ ಕೆಲಸಗಳನ್ನೂ ತಾನೇ ಬೇಗಬೇಗ ಮಾಡುತ್ತಿದ್ದಳು. ಕೆಲಸ ಮಾಡು ವುದರಲ್ಲಿ ಬಲು ಗಟ್ಟಿಗಳು. ಹನ್ನೆರಡು ಗಂಟೆಯೊಳಗಾಗಿ ರುಚಿರುಚಿಯ ಅಡುಗೆಯನ್ನೂ ಮಾಡಿ ಬಡಿಸುತ್ತಿದ್ದಳು. ರಾಮಾಚಾರ್ಯರು ಬಂದು ದೇವರ ಪೂಜೆ ಮಾಡಿಕೊಂಡು ಹೋದಮೇಲೆ ಊಟ. ಸೀತಮ್ಮನ ಕೆಲಸ ಮಕ್ಕಳಿಗೆ ಮೈ ತೊಳಸುವುದು, ಜಡೆ ಹಾಕಿ ಹೂ ಮುಡಿಸುವುದು ಎರಡೇ.

ಮುದುಕಿ, ತಾಯಿ ಮಕ್ಕಳಿಗೆ ತುಂಬ ಎಣ್ಣೆ ಹಚ್ಚಿ ಎರೆದಳು. ಮನೆಯಲ್ಲಿ ಎಮ್ಮೆಗಳಿದ್ದುದರಿಂದ ಹಾಲು, ಮೊಸರು, ತುಪ್ಪಕ್ಕೆ ಕೊರತೆ ಯಿಲ್ಲ. ದಿನವೂ ರುಚಿರುಚಿ ಅಡುಗೆ ಮಾಡಿ ಬಡಿಸುತ್ತಿದ್ದಳು. ಒಂದ ಲ್ಲದ ಹಾಗೆ ಎರಡು ಉಪ್ಪಿನಕಾಯಿ—ನಿಂಬೆಕಾಯಿಯದು, ಮಾವಿನ ಕಾಯಿಯದು. ಹಪ್ಪಳ, ಸಂಡಿಗೆ ಎಲ್ಲ ಮಾಡಿದ್ದಳು. "ಬಸಿರಿಯ ಬಯಕೆ ಸಾವಿರವಿರಬಹುದು. ನನ್ನ ಈಗಿನ ಜನ್ಮಕ್ಕೆ ದೇವರು ಮಕ್ಕಳು ಕೊಡಲಿಲ್ಲ. ಮುಂದಿನ ಜನ್ಮಕ್ಕಾದರೂ ಕೊಡಲಪ್ಪ. ಅದಕ್ಕಾಗಿ ಇದು ನನ್ನ ಸೇವೆ" ಎಂದುಕೊಂಡು ತುಳಸೀಬಾಯಿ ಆಕೆಗೆ ಆದರದಿಂದ ಸತ್ಕಾರ ನಡಸಿದಳು. ಸೀತಮ್ಮನಿಗೆ ಇಂಥ ಉಪಚಾರ ಸಿಕ್ಕಿದ್ದು ಇದೇ ಮೊದಲು. ಬಲು ಆನಂದವಾಯಿತು.

ಮಧ್ಯಾಹ್ನದ ಹೊತ್ತು ಎದುರುಮನೆಯ ಶಂಕರಮ್ಮನವರೂ ಬರು ತ್ತಿದ್ದರು. ಎಲ್ಲರೂ ಬಹಳ ಹೊತ್ತು ಮಾತುಕತೆ ನಡಸುತ್ತಿದ್ದರು. ಒಂದು

ದಿನ ಶಂಕರಮ್ಮ ಸೀತಮ್ಮನ ವಿಷಯಕ್ಕೆ ತುಂಬ ಅತ್ತುಬಿಟ್ಟರು. ಆಕೆಯ ತವರು ಕಷ್ಟ ನೋಡಿ, ಅತ್ತೆಮನೆಯ ಕಷ್ಟ ಕೇಳಿ ಅವರಿಗೆ ಬಹಳ ದುಃಖ ವಾಯಿತು. "ಹೆತ್ತ ಮಗಳನ್ನೂ, ಮೊಮ್ಮಕ್ಕಳನ್ನೂ ಬಿಟ್ಟು ಒಬ್ಬನೇ ಗಂಡುಮಗನ ಲಗ್ನಕ್ಕೆ ಹೋದರಲ್ಲ ಚಂಡಾಲರು! ಬೀದಿಯವರೇನೆಂದು ಕೊಂಡಾರೆಂಬ ಭಯವೂ ಇಲ್ಲವೆ? ನಾಚಿಕೆಗೇಡು! ಶುದ್ಧ ನೀಚರು. ಆಕೆ ಹೇಳಿದರೆ, ಗೋವಿಂದರಾಯರಿಗೆ ಬುದ್ಧಿಯಿಲ್ಲವೆ? ಹುಡುಗನಂತೂ ಬೆಪ್ಪುತಕ್ಕಡಿ, ಬುದ್ಧಿಯೇ ಇಲ್ಲ. ನಿಮ್ಮಪ್ಪನಿಗೇನು ಧಾಡಿ! ಆತನೂ ಈಗ ಏಕೊ ಸರಿಯಾಗಿಲ್ಲ. ಬಹಳ ಕೆಟ್ಟುಹೋಗಿದಾನೆ. ಊರಿನವರಿಗೆಲ್ಲ ಶತ್ರು. ಮಹಡಿಮನೆಯ ಸೋಮಣ್ಣನವರ ಹತ್ತಿರ ಜಮೀನಿನ ವಿಷಯ ದಲ್ಲಿ ಮನಸ್ತಾಪ ಕಟ್ಟಿಕೊಂಡಿದಾನೆ. ಗೌಡರ ಚನ್ನಪ್ಪನ ಹತ್ತಿರ ಮನೆಯ ವ್ಯಾಜ್ಯ. ಏಕೊ, ಅವನ ನಡತೆ ಚೆನ್ನಾಗಿಲ್ಲ....ನೀನೇಕಮ್ಮ ಸುಮ್ಮನಿದ್ದಿ? ನಾನೂ ಬರುತೇನೆಂದು ಹಠ ಹಿಡಿಯಬೇಕಾಗಿತ್ತು. ಮಕ್ಕಳನ್ನಾದರೂ ಬಲವಂತದಿಂದ ಕಳಿಸಬೇಕಾಗಿತ್ತು. ಪಾಪ, ಅವು ಇನ್ನೆಂದುತಾನೇ ಅಂಥ ಉತ್ಸವಗಳನ್ನು ನೋಡಬೇಕು. ಏನೊ ಇರುವುದು ಒಬ್ಬ ಮಗ. ಅದೂ ರೋಗಿ, ಹುಚ್ಚ, ಪೋಲಿ. ಅವನ ಮದುವೆ ಮಾಡುವುದು ಈ ರೀತಿ! ಶುದ್ಧ ಅವಲಕ್ಷಣ. ನೀನು ಹಠ ಹಿಡಿದು ಹೋಗಲೇಬೇಕಾಗಿ ತ್ತಮ್ಮ" ಎಂದರು.

"ಇಲ್ಲ. ನನಗೆ ಹಠ ಹಿಡಿದು ಅಭ್ಯಾಸವಿಲ್ಲ. ಹಾಗೆ ಮಾಡಿದರೆ ಅವರು ಕರೆದುಕೊಂಡು ಹೋಗಬಹುದು. ಆದರೆ ನನ್ನಿಂದ ಅವರಿಗೆಷ್ಟು ತೊಂದರೆಯೊ ಯಾರಿಗೆ ಗೊತ್ತು. ಇಷ್ಟವಿಲ್ಲದಿರುವುದರಿಂದಲೇ ಅವರು ನನ್ನನ್ನು ಕರೆಯಲಿಲ್ಲ. ನಾನೇಕೆ ಬಲವಂತದಿಂದ ಅವರ ಮನ ನೋಯಿ ಸಲಿ. ಇನ್ನು, ಮಕ್ಕಳನ್ನು ಕಳಿಸುವ ವಿಷಯ. ಲಲಿತ ಕೇಳಿದಳಂತೆ. ಅದಕ್ಕೆ ಅವರ ತಾತ ಉತ್ತರವನ್ನೇ ಕೊಡಲಿಲ್ಲವಂತೆ. ಮಕ್ಕಳನ್ನು ಕರೆದುಕೊಂಡು ಹೋಗುವ ಇಷ್ಟವೂ ಅವರಿಗಿಲ್ಲ. ನಾವೇಕೆ ತೊಂದರೆ ಕೊಡೋಣ? ಯಾರಿಗೂ ಬೇಸರಪಡಿಸುವುದು ಒಳ್ಳೆಯದಲ್ಲ. ನಮ್ಮ ನಮ್ಮ ಕರ್ಮ. ನಮಗೆ ಎಷ್ಟು ಲಭಿಸಬೇಕೊ ಅಷ್ಟೆ ಸಿಕ್ಕುತದೆ. ಮನು ಷ್ಯನ ಆಸೆಯೆಲ್ಲ ಪೂರೈಸಿದರೆ ಹೀಗೇಕೆ! ಏನೊ, ನೀವೆಲ್ಲ ದಯೆಯಿಂದ ಕಾಣುತೀರಲ್ಲ. ನನಗೆ ತುಂಬ ಆನಂದ. ನಮ್ಮ ಮಾವನವರ ಊರಿನ ಲ್ಲಿಯೂ ಹೀಗೆಯೆ. ಬೀದಿಯವರೆಲ್ಲ ನನ್ನನ್ನು ಕರುಣೆಯಿಂದ ಕಾಣು

ತಾರೆ. ಹೆಚ್ಚು ಕಷ್ಟಕ್ಕೀಡಾದವರನ್ನು ಕಂಡರೆ ಜನರಿಗೆ ಕನಿಕರ ಹೆಚ್ಚು. ನನ್ನ ದುರದೃಷ್ಟದಿಂದ ಮದುವೆಗೆ ಹೋಗಲಾಗಲಿಲ್ಲ. ಆದರೆ ನಿಮ್ಮೊಡನೆ ಸುಖದಿಂದಿರುವ ಸುಯೋಗ ಒದಗಿತಲ್ಲ '' ಎಂದಳು.

ಶಂಕರಮ್ಮ "ನೀನು ಏನೇ ಅನ್ನು, ಸೀತಮ್ಮ. ಬರಿಯ ವೇದಾಂತ ಹೇಳುತೀಯೆ. ಕಾಲಿಗೆ ಮುಳ್ಳು ಚುಚ್ಚಿದರೆ ಅದು ನಿನ್ನ ಕರ್ಮವೆಂದು ಸುಮ್ಮನೆ ಕುಳಿತುಬಿಡುತೀಯ ? ತಕ್ಷಣವೆ ಅದನ್ನು ತೆಗೆದುಹಾಕುವುದಿಲ್ಲವೆ ? ಕಷ್ಟ ಬಂದರೆ, ಇನ್ನೊಬ್ಬರು ತಂದೊಡ್ಡಿದರೆ ಅದು ನನ್ನ ಕರ್ಮಫಲ, ಎಂದುಕೊಂಡು ಸುಮ್ಮನಿರುತಾರೇನು ? ಅದರಿಂದ ಪಾರಾಗುವ ಪ್ರಯತ್ನಪಡಬೇಕು. ನಿನ್ನನ್ನು ಬಿಟ್ಟುಹೋದುದಕ್ಕೆ ಕಾರಣವೇನು ನಿನಗೆ ಗೊತ್ತೆ ? ಎಲ್ಲ ನಿಮ್ಮ ಮಲತಾಯಿಯ ಆಟ. ಆಕೆ ಕಾಲಿನಿಂದ ತೋರಿಸಿದುದನ್ನು ಶಿರಸಾವಹಿಸಿ ಮಾಡುತಾನೆ ನಿಮ್ಮಪ್ಪ. ಅಲ್ಲಿ ಸಿಕ್ಕಿರುವ ಬೀಗರೊ ! ಸರಿಯಾಗಿದಾರೆ....ಆ ಕತೆ ನಿಮಗೆ ಗೊತ್ತೇನು ತುಳಸೀಬಾಯಿ ? ಹೇಳುತೇನೆ, ಕೇಳಿ. ಮೊನ್ನೆ ನಾನು ಬೆಂಗಳೂರಿಗೆ ಹೋಗಿದ್ದೆನಲ್ಲ, ಅಲ್ಲಿ ನಮ್ಮ ಹುಡುಗನ ಮನೆಯ ಹತ್ತಿರದಲ್ಲಿಯೆ ಚನ್ನಕೃಷ್ಣಯ್ಯನವರು ಎಂತ ಒಬ್ಬರಿದಾರೆ. ಅವರೇ ಈ ಮದುವೆ ನಿಶ್ಚಯ ಮಾಡಿಸಿದವರು. ಬೀಗರು ಸಿದ್ಧಾಪುರದ ಸಾಹುಕಾರರಂತೆ. ಅವರ ಹೆಸರು ನಿಮಗೆ ಗೊತ್ತಿದೆಯಲ್ಲ — ಶಾಮರಾಯರು ·· ಆ ಹುಡುಗಿಗೆ ಇಪ್ಪತ್ತು ವರುಷವಂತೆ, ಮೂರ್ಛೆರೋಗವಂತೆ, ತೊನ್ನಿದೆಯಂತೆ ; ಮೂರು ಸಲ ಅರ್ಧ ಮದುವೆಯಾಗಿ ನಿಂತಿದೆಯಂತೆ. ಈ ಸಲವೇನಾಗುತದೆಯೊ !—ಈ ಸಲ ಏಕೆ ನಿಲ್ಲುತ್ತೆ ? ಸಾವಿರದೈನೂರು ರೂಪಾಯಿ ವರದಕ್ಷಿಣೆ ಬೇರೆ ಕೊಡುತಾರೆ "ಎಂದ ಕೂಡಲೆ ತುಳಸೀಬಾಯಿ ಆಶ್ಚರ್ಯದಿಂದ '' ವರದಕ್ಷಿಣೆ ಕೊಡುತಾರಂತೇನು ! ನಮಗೆ ಗೊತ್ತೇ ಇಲ್ಲವೆ ? ಹಾಗಾದರೆ ಇಂಥ ಅವಲಕ್ಷಣದ ಬೀಗರು ಗಂಟು ಬಿದ್ದರು ಅನ್ನಿ. ದುಡ್ಡಿನ ಆಸೆಗೆ ಅಂಥ ಹೆಣ್ಣನ್ನು ತರುವುದೆ ? ಛೆ ! ಛೆ ! ಏನು ಜನವೊ. ಮಡಿ ಮೈಲಿಗೆ ಹೇಗೆ ನಡೆಯುತದೆ ಮನೆಯಲ್ಲಿ? ಥೂ ಅಸಹ್ಯ. ಸಾಲದ್ದಕ್ಕೆ ರೋಗ ಬೇರೆ. ಈ ವಿಷಯವೆಲ್ಲ ನಿನಗೆ ಗೊತ್ತಿಲ್ಲವೆ ಸೀತಮ್ಮ ?'' ಎಂದು ಕೇಳಿದರು.

• '' ನನಗೇನು ಗೊತ್ತು ತುಳಸೀಬಾಯಿ. ನನಗೆ ಹೇಳುವವರಾರು, ನನ್ನನ್ನು ಕೇಳುವವರಾರು ? ನನಗೇನು ಅಧಿಕಾರವಿದೆ ? ಎಲ್ಲ ನಮ್ಮ ಮಲತಾಯಿಯದು. ಇದೆಲ್ಲ ಆಕೆಯ ಏರ್ಪಾಡಿರಬಹುದು. ನಮ್ಮ

ತಂದೆ ಹೀಗೆ ಹೆಂಡತಿ ಹೇಳಿದುದನ್ನೆಲ್ಲ ಕೇಳುವ ಸ್ವಭಾವದವನಾಗಿರಲಿಲ್ಲ. ಅದೇಕೊ, ಈಗ ಹೀಗಾಗಿಬಿಟ್ಟ. ಪಾಪ, ನಮ್ಮ ತಾಯಿ ಸಾಯುವಾಗ 'ನನ್ನ ಮಗ ಚೆನ್ನಾಗಿ ಬಾಳಲಿ, ಸುಖವಾಗಿರಲಿ, ಎಂದು ಪದೇಪದೇ ಹೇಳಿದಳು. ಇಷ್ಟು ದಿನ ಬಿಟ್ಟು ಈಗ ಇಂಥ ಮದುವೆಯಿಂದ ಅವನ ಬಾಳನ್ನು ಹದಗೆಡಿಸುತಾರೆಂದು ನಾನೆಣಿಸಿರಲಿಲ್ಲ. ಹೆಣ್ಣು ಈ ಗತಿಯು ದೇನು! ಹಾಗಾದರೆ ನನ್ನ ತವರೂ ತುಂಬ ಕೆಟ್ಟಂತಾಯಿತು" ಎಂದು ನಿಟ್ಟುಸಿರುಬಿಟ್ಟಳು.

ಹೊರಗಿದ್ದ ಲಲಿತ "ಶಂಕರಮ್ಮ, ನಿಮ್ಮ ಯಜಮಾನರು ಬಂದರು" ಎಂದಳು. ಶಂಕರಮ್ಮ "ನಾನು ಬರುತೇನಮ್ಮ, ಕಾಫಿ ಬಿಸಿ ಮಾಡಬೇಕು ಎಂದು ಎದ್ದು ಹೊರಟುಹೋದರು.

ಎಂಟುದಿನ ಬಲು ಬೇಗ ಕಳೆಯಿತು. ಸೀತಮ್ಮನ ಕಣ್ಣಿಗೆ ಈ ಸುಖದ ಜೀವನ ಮಿಂಚಿ ಹೋದಂತಾಯಿತು. ಹನುಮಣ್ಣ ಮುಂಜಾನೆಯೆ ಗಾಡಿ ಕಟ್ಟಿಕೊಂಡು ಬಸ್ಸಿನ ದಾರಿಗೆ ಹೊರಟ. ಸೀತಮ್ಮ ಮನೆಯ ಬಾಗಿಲನ್ನು ತೆರೆದು ಮನೆಯೆಲ್ಲ ಸಾರಿಸಿ ಗುಡಿಸಿ ರಂಗವಲ್ಲಿ ಹಾಕಿ ಶುಚಿ ಗೊಳಿಸಿದ್ದಳು. ಮಕ್ಕಳಿಗೆಲ್ಲ ಮೈ ತೊಳಸಿ, ಜಡೆ ಹಾಕಿ ಹೂ ಮುಡಿಸಿ, ಮಲತಾಯಿಗೊಂದು ದಂಡೆ ಮಾಸಲಿಟ್ಟು ಅವರಿಗಾಗಿ ಒಳಬಾಗಿಲಲ್ಲಿ ಕಾಯುತ್ತಿದ್ದಳು.

ಗಾಡಿ ಬಂತು. ಒಳಗಿನಿಂದ ಮದುವೆಯಾದ ಸುಬ್ಬಣ್ಣ ಇಳಿದ. ನರಸಿಂಹ ಜೋಯಿಸರು ಇಳಿದರು. –ಎಲ್ಲರೂ ಇಳಿದರು. ಜೋಯಿಸರು ಶಾಸ್ತ್ರೋಕ್ತದಿಂದ ಎಲ್ಲರನ್ನೂ ಒಳಗೆ ಕರೆದುಕೊಂಡುಹೋದರು. ಗೋವಿಂದರಾಯರ ಒಳಜೇಬು ತುಂಬ ದಪ್ಪವಾಗಿತ್ತು.

೬

ಸೀತಮ್ಮನ ತವರುಮನೆಯ ಜೀವನ ಮುಗಿಯಿತು. ದೇವರ ದಯೆಯಿಂದ ಸುಖಪ್ರಸವ ನಡೆದು, ಮಗು ಬಾಣಂತಿ ಮೂರು ತಿಂಗಳು ಕಳೆದರು. ಪಾರ್ವತಮ್ಮ, ಎಂದು ಮೂರು ತಿಂಗಳು ಕಳೆದೀತೋ ಎಂದು ಕಾಯುತ್ತಿದ್ದಳು. ಮದುವೆಯಾದಮೇಲಂತೂ ಸುಬ್ಬಣ್ಣ ತುಂಬ ಕೆಟ್ಟು ಹೋದ. ತಂದೆಗೂ ಈ ಮಗಳು ಬೇಗ ತೊಲಗಿದರೆ ಸಾಕಪ್ಪಾ, ಎನ್ನಿಸಿ ಬಿಟ್ಟಿತ್ತು. ಬರುವ ಚೌತಿ ಕಳಸಿಕೊಡುವ ಯೋಚನೆ ಮಾಡಿದ.

ಸಂಜೆ ಆರು ಗಂಟೆಯ ಸಮಯ. ಮಗಳು ಒಳಗೆ ಮಗುವಿನ ತೊಟ್ಟಿಲು ತೂಗುತ್ತಿದ್ದಳು. ನಡುಮನೆಯಲ್ಲಿ ಕುಟ್ಟವಲಕ್ಕಿ ತಿನ್ನುತ್ತಿದ್ದ ಗೋವಿಂದರಾಯರು ಮಗಳನ್ನು ಕರೆದರು. ತೊಟ್ಟಿಲು ಜೋಲಿ ಬಿಟ್ಟು, ಸೀತಮ್ಮ ಬಂದಳು.

"ಚೌತಿ ಕಳಿಸುವ ಏರ್ಪಾಡು ಮಾಡುತೇನಮ್ಮಾ. ಪಾಪ, ನಿಮ್ಮತ್ತಿಗೆ ಎಷ್ಟು ಅನನುಕೂಲವಾಗಿದೆಯೊ ಏನೊ. ನೀನು ಬಂದು ಆರು ತಿಂಗಳಾಯಿತು. ಆಕೆಯೊಬ್ಬರೇ ಮನೆಯಲ್ಲಿ ಎಲ್ಲ ಕೆಲಸ ಮಾಡಬೇಕು. ಇನ್ನೇನು, ಮೂರು ತಿಂಗಳು ಕಳೆಯಿತಲ್ಲ. ಹೋಗಿಬಿಟ್ಟು ಬಾ. ಚೌತಿ ಒಂದು ತೊವ್ವೆ ಪಾಯಸ ಮಾಡಿಸಿ ಎಲ್ಲ ಅನುಕೂಲಪಡಿಸಿಕೊಡುತೇನೆ. ಹನುಮಣ್ಣನೇ ಗಾಡಿ ತೆಗೆದುಕೊಂಡು ನಿನ್ನನ್ನು ಬಿಟ್ಟುಬರುತಾನೆ."

"ಒಳ್ಳೆಯದಪ್ಪ, ನಿನ್ನ ಏರ್ಪಾಡಿಗೆ ನಾನು ಒಪ್ಪಿದೆ. ಆದರೆ ನಾನೊಂದು ತಿಳಿಸಬೇಕೆಂದಿದೇನೆ. ಹೇಳಲೆ?"

"ಅಗತ್ಯವಾಗಿ"

"ನಾನು ಊರಿಗೆ ಬರುವಾಗ ನಮ್ಮತ್ತೆ ಮಾವಂದಿರು ಪದೇಪದೇ ನನಗೆ ಹೇಳಿದರು; ಮಗುವಿಗೆ ಆರು ತಿಂಗಳಾಗುವವರೆಗೂ ಬರಬೇಡ, ನಾವು ಕಾಗದ ಬರೆದ ಮೇಲೇ ಬರಬೇಕು, ಎಂದು ಅಪ್ಪಣೆ ಮಾಡಿದಾರಪ್ಪ. ಇಲ್ಲಿ ಬಿಟ್ಟು ಗಾಡಿ ಹತ್ತಿದ ಮಾವನವರು ನನ್ನನ್ನು ಕರೆದು ಪುನಃ ಅದೇ ಮಾತನ್ನು ಹೇಳಿದರಲ್ಲಪ್ಪ. ಅದು ನಿನಗೆ ಕೇಳಿಸಿರಬಹುದು."

ಅವಲಕ್ಕಿಯೊಳಗೆ ಏನೊ ಆರಿಸುವವನಂತೆ ಕೆದಕುತ್ತ "ಹಾಗಾದರೆ ಇನ್ನೂ ಇರಬೇಕೆಂಬುದು ನಿನ್ನ ಇಷ್ಟವೇನು?"

"ನನ್ನ ಇಷ್ಟ ಅಲ್ಲಪ್ಪ. ಮಾವನವರು ಹಾಗೆ ಹೇಳಿದರು; ನೀನು ಹೀಗೆ ಹೇಳುತೀಯೆ. ಈಗ ನಾನೇನು ಮಾಡಬೇಕೆಂದು ನಿನ್ನನ್ನೇ ಕೇಳುತಿದೇನೆ, ಅಷ್ಟೆ."

"ನಾನು ಹೇಳುವುದು ಹೊರಡು ಎಂತ."

"ಅವರು ನನಗೇನಾದರೂ ಅಂದರೆ ಏನು ಹೇಳಲಿ?"

"....ಏನು ಹೇಳುವುದು........ನನ್ನ ಇಷ್ಟ, ಬಂದೆ. ಎಂದರಾಯಿತು."

"ಸುಳ್ಳು ಹೇಳುವುದೇ?"

"ಹಾಗಾದರೆ ನಿಜವನ್ನೇ ಹೇಳು. ನಮ್ಮ ತಂದೆ ಹೊಟ್ಟೆಗೆ ಹಾಕ

ಲಾರದ ಸಂಕಟಕ್ಕೆ ಕತ್ತು ಹಿಡಿದು ದೂಡಿದ, ಎಂತ ಹೇಳು" ಎಂದು ಸಿಟ್ಟಿನಿಂದ ಕೈಯೊಳಗಿದ್ದ ನೀರಿನ ಪಾತ್ರೆಯನ್ನು ನೆಲಕ್ಕೆ ಕುಕ್ಕಿದರು.

"ಇರುವ ವಿಷಯ ಹೇಳುತೇನೆ. ಇಲ್ಲದುದನ್ನೇಕೆ ಹೇಳಲಪ್ಪ. ನಿನ್ನಿಷ್ಟದಂತಾಗಲಿ. ಹೊರಡಲು ಸಿದ್ಧಳಾಗಿದೇನೆ. ಪಾಲಿಗೆ ಬಂದುದು ಪಂಚಾಮೃತ; ಕಷ್ಟವಾದರೂ ಬರಲಿ, ಸುಖವಾದರೂ ಬರಲಿ. ಎಲ್ಲವನ್ನೂ ತೆಗೆದುಕೊಳ್ಳುತೇನೆ. ಹಿರಿಯರ ಮನಸ್ಸು ನೋಯದಿದ್ದರೆ ಸಾಕು" ಎನುತ್ತ, ಅಳುತ್ತಿದ್ದ ಮಗುವಿನ ತೊಟ್ಟಿಲು ತೂಗಲು ಕೋಣೆಗೆ ಹೋದಳು.

ಊರಿಗೆ ಹೋಗುವ ಮಗಳಿಗೆ, ಮೊಮ್ಮಗುವಿಗೆ ಏನಾದರೂ ಉಡುಗೊರೆ ಕೊಡದೆ ಕಳಿಸಿದರೆ ಚೆನ್ನಾಗಿರುವುದಿಲ್ಲ. ಅದೂ ಅಲ್ಲದೆ ಮಗನ ಮದುವೆಯ ಉಡುಗೊರೆಯೂ ಮಗಳಿಗೆ ಸಂದಿಲ್ಲ. ನಲವತ್ತು ರೂಪಾಯಿಯ ಒಂದು ಸೀರೆ ತೆಗೆದು ಕೊಡೋಣ, ಮಗುವಿನ ಕಾಲಿಗೊಂದು ಜೊತೆ ಚೈನು ಮಾಡಿಸಿಕೊಡೋಣ ಎನ್ನಿಸಿತು. ಈ ಬಯಕೆಯನ್ನು ಹೆಂಡತಿಯ ಹತ್ತಿರ ಗೋವಿಂದರಾಯರು ತಿಳಿಸಿದರು. ಅವಳು ಅದಕ್ಕೆ ಕೊಕ್ಕೆ ಹಾಕುತ್ತಾಳೆಂಬುದು ತಿಳಿದಿತ್ತು. "ಸೀರೆಗೀರೆ ಏನೂ ಕೊಡಬೇಡಿ. ಮಗುವಿಗೆ ಒಂದು ರೂಪಾಯಿ ಕೊಟ್ಟರಾಯಿತು, ಚೈನೇಕೆ? ನನ್ನ ಹತ್ತಿರ ಒಳ್ಳೆಯ ರವಿಕೆ ಕಣಗಳಿವೆ. ಅದರಲ್ಲೊಂದನ್ನು ಕೊಟ್ಟರಾಯಿತು" ಎಂದಳು. ಇದನ್ನು ಕೇಳಿದ ಕೂಡಲೆ ಗೋವಿಂದರಾಯರ ಮುಖ ಸಪ್ಪಗಾಯಿತು. ಸ್ವಲ್ಪ ಸಿಟ್ಟೂ ಬಂತು. ಆದರೆ ಏನು ಮಾಡಿಯಾರು! ಅವಳ ಹತ್ತಿರ ತನ್ನ ಬೇಳೆಯುಕಾಳು ಬೇಯುವಂತಿಲ್ಲ. ಸುಮ್ಮನಾದರು. ಆಕೆಗೆ ತಿಳಿಯದಂತೆ ನಾನೇಕೆ ಕೊಡಬಾರದು, ಎಂದೊಮ್ಮೆ ಅನ್ನಿಸಿತು. ಆದರೆ, ಹೇಗಾದರೂ ಅದು ಆಕೆಗೆ ತಿಳಿದುಬಿಟ್ಟರೆ ದೊಡ್ಡ ರಾಮಾಯಣ ಆಗಿ ಬಿಡುತ್ತದೆ. ಅದೂ ಅಲ್ಲದೆ "ಹೆಣ್ಣು ಮಕ್ಕಳಿಗೆ ಎಷ್ಟು ಮಾಡಿದರೂ ಕಷ್ಟ ಬಂದಾಗ 'ಏನು ಮಾಡಿದರು ತವರು ಮನೆಯವರು?' ಎಂದು ಝೂಡಿಸಿ ಬಿಡುತಾರೆ" ಎಂಬ ಗೋಪಾಲಾಚಾರ್ಯರ ಮಾತು ಜ್ಞಾಪಕಕ್ಕೆ ಬಂತು. ಕೊಟ್ಟಿದ್ದರಿಂದ ಆಗುವುದೇನು? ಎಂದುಕೊಂಡ. ತಾನು ಈ ಹೊಟ್ಟೆನೋವಿನ ಮತ್ತು ಮಾರಿ ಹೆಂಡತಿಯ ಜಗ್ಗಾಟದಲ್ಲಿ ಎಷ್ಟು ದಿನ ತಾನೇ ಬಾಳಬೇಕು? ಇದ್ದಷ್ಟು ದಿನ ದೂರವಾಗಿಯೇ ಇದ್ದರಾಯಿತು. ಹೆಣ್ಣು ಮಕ್ಕಳನ್ನು ಹೆಚ್ಚಿಗೆ ಹಚ್ಚಿಕೊಳ್ಳಬಾರದು. ತಾನು ಸತ್ತ ಮೇಲೆ ಏನಾದರೂ ಆಗಲಿ. ಈಗ ಸುಮ್ಮನಿದ್ದುಬಿಡೋಣ, ಎಂದನ್ನಿಸಿತು.

ಮಗಳಿಗೆ ಉಡುಗೊರೆ ಕೊಡುವ ಬಯಕೆಯನ್ನು ಅತ್ತ ಕಳಚಿ ಹಾಕಿದ.

ಮಗನಿಗೂ ಸಹ ಅಕ್ಕ ಗಾಡಿಬಿಟ್ಟರೆ ಸಾಕಾಗಿತ್ತು. ದಿನಬೆಳಗಾದರೆ ಪುರಾಣ. ಅವಳ ವೇದಾಂತ ಕೇಳಿ ಅವನಿಗೆ ಬೇಸರ. ಒಂದೊಂದು ಗಂಟೆ ಬೋಧನೆ ಮಾಡಿಬಿಡುತ್ತಿದ್ದಳು. ಅವಳು ಆಗಾಗ ತನ್ನ ತಾಯಿಯ ವಿಷಯವಾಗಿ ಮಾತಾಡುತ್ತಿದ್ದುದರಿಂದಲೂ, ಮೊದಲಿಂದಲೂ ಆಕೆಗೆ ಎದು ರಾಡುವ ಅಭ್ಯಾಸವಿಲ್ಲದಿದ್ದುದರಿಂದಲೂ ಆಕೆಯ ಮೇಲೆ ಅವನು ಹೆಚ್ಚು ರೇಗುತ್ತಿರಲಿಲ್ಲ. ಆದರೆ ಈ ಅಡ್ಡಿ ಬೇಗ ಹೋದರೆ ಸಾಕಪ್ಪ, ಎನ್ನಿಸಿ ಬಿಟ್ಟಿತ್ತು. ಜ್ಯೋತಿ ಆಕೆಯನ್ನು ಕಳಿಸುವ ವಿಷಯ ಕೇಳಿ ತುಂಬ ಸಂತೋಷವಾಯಿತು.

ಆ ದಿನ ಬಂದೇ ಬಿಟ್ಟಿತು. ಹಿಂದಿನ ರಾತ್ರಿ ಎದುರುಮನೆಯ ಶಂಕರಮ್ಮನವರು ಸೀತಮ್ಮನನ್ನು ಮಕ್ಕಳೊಂದಿಗೆ ಊಟಕ್ಕೆ ಕರೆದಿದ್ದರು. ಆದರೆ ಪಾರ್ವತಮ್ಮ ಊಟಕ್ಕೆ ಹೋಗಕೂಡದೆಂದು ಸೀತಮ್ಮನಿಗೆ ಹೇಳಿ ಬಿಟ್ಟಳು. ಶಂಕರಮ್ಮನವರಿಗೆ ಬಲು ಅಸಮಾಧಾನವಾಯಿತು. ಅವರಿಗೆ ಗೊತ್ತು—ಇದೆಲ್ಲ ಪಾರ್ವತಮ್ಮನ ಕೆಲಸ, ಎಂದು. ಸೀತಮ್ಮ ಏನು ಮಾಡಿಯಾಳು, ಎಂದುಕೊಂಡು ಸುಮ್ಮನಿದ್ದರು.

ಬೆಳಕು ಹರಿಯುವುದರೊಳಗಾಗಿ ಒಕ್ಕಲಗಿತ್ತಿ ಬಂದು ಮಗು ಬಾಣಂತಿ ಇವರಿಗೆ ಎರೆದುಕೊಟ್ಟಳು. ಸೂರು ಅನ್ನ ಸಾರು, ಪಾಯಸ ಮಾಡಿದ. ಸೀತಮ್ಮ ಹುಡುಗರ ಬಟ್ಟೆಬರೆಗಳನ್ನೂ ತನ್ನ ಎಲ್ಲ ಸಾಮಾನು ಗಳನ್ನೂ ಕಟ್ಟಿಕೊಂಡಳು. ಮಕ್ಕಳ ಸ್ನಾನ, ಜಡೆ ಮುಗಿಯಿತು.

ಒಂದು ತಟ್ಟೆಯಲ್ಲಿ ಎಲೆ ಅಡಕೆ, ಕಣ, ಕುಂಕುಮದ ಬಟ್ಟಲು ಇಟ್ಟುಕೊಂಡು ಕೋಣೆಯಲ್ಲಿ ಕುಳಿತಿದ್ದ ಪಾರ್ವತಮ್ಮ ಸೀತಮ್ಮನನ್ನು ಕರೆದಳು. ಸೀತಮ್ಮ ಕೋಣೆಗೆ ಬಂದಳು.

"ಬಾ, ತೆಗೆದುಕೊ, ಕುಂಕುಮ ತೆಗೆದುಕೊ" ಎಂದು ತಟ್ಟೆಯನ್ನು ಮುಂದಿಟ್ಟಳು.

ಸೀತಮ್ಮ ಹಣೆಗೆ ಮತ್ತು ತಾಳಿಗೆ ಕುಂಕುಮ ಹಚ್ಚಿಕೊಂಡು ಉಡುಗೊರೆ ತೆಗೆದುಕೊಂಡಳು. ಪಾರ್ವತಮ್ಮ "ಮಗುವಿನ ಕೈಗೆ ಇದು" ಎಂದು ಒಂದು ರೂಪಾಯಿಯನ್ನು ಆಕೆಯ ಕೈಗೆ ಕೊಟ್ಟಳು. ಮಗು ಮಲಗಿತ್ತು. ಸೀತಮ್ಮ ನಡುಮನೆಗೆ ಬಂದಳು.

ಬೀದಿಯ ಬಾಗಿಲಲ್ಲಿ ಹನುಮಣ್ಣ ನಿಂತಿದ್ದ.

" ಹನುಮಣ್ಣ, ನೀನು ಒಂದು ದಿನ ನಮ್ಮೂರಿನಲ್ಲಿಯೇ ಇರಬೇಕು. ನಾನು ನಮ್ಮವರಿಗೆ ಹೇಳುತೇನೆ. ಆದುದರಿಂದ, ನೀನು ಹೇಳುವ ಹಾಗೆ ನನ್ನನ್ನು ಬಿಟ್ಟ ಕೂಡಲೆ ಗಾಡಿ ಹೊಡೆದುಕೊಂಡು ಬರಬಾರದು" ಎಂದು ಸೀತಮ್ಮ ಕಣವನ್ನು ಪೆಟ್ಟಿಗೆಯೊಳಗಿಡುತ್ತ ಹೇಳಿದಳು.

" ನಿಮ್ಮ ಇಷ್ಟ ತಾಯಿ, ನನಗೇನೊ ಸೂರಪ್ಪನವರ ಮನೆಯಲ್ಲಿರಲು ಮನಸ್ಸೇ ಇಲ್ಲ. ನೀವೇ ಬಲವಂತ ಮಾಡಿದರೆ? ಆಗಲಿ ತಾಯಿ. ಮೂರು ಗಂಟೆಯ ಹೊತ್ತಿಗೆ ಗಾಡಿ ಬಂದುಬಿಡುತದೆ. ಇವೊತ್ತು ಹೊಸ ಜೊತೆ ಎತ್ತು ಕಟ್ಟುತೇನೆ. ಇಲ್ಲಿಂದ ಬೆಂಗಳೂರಿಗೆ ಬೇಕಾದರೂ ನೊಗ ಬಿಚ್ಚದೆ ಹೊಡೆಯಬಹುದು. ಒಳ್ಳೆ ಜೊತೆ. ನಾನು ಬರುತೇನೆ, ತಾಯಿ. ............ಅಡಕೆ ಬೇಕಿತ್ತು. ಸೂರಣ್ಣ ಕೊಟ್ಟ" ಎಂದು ಹೇಳುತ್ತ ಹೊರಟುಹೋದ.

ಹನ್ನೆರಡು ಗಂಟೆಯೊಳಗಾಗಿ ಊಟ ಮುಗಿಯಿತು. ಸೀತಮ್ಮ, ಗಾಡಿ ಬರುವುದರೊಳಗಾಗಿ ಎಲ್ಲರಿಗೂ ಹೇಳಿಬಿಟ್ಟು ಬರೋಣ, ಎಂದುಕೊಂಡು ಮಕ್ಕಳನ್ನು ಮನೆಯಲ್ಲಿಯೇ ಬಿಟ್ಟು ಶಂಕರಮ್ಮನವರ ಮನೆಗೆ ಹೊರಟಳು.

ಶಂಕರಮ್ಮ " ಬಾ ಸೀತಮ್ಮ, ನಿನ್ನೆ ಪಾರ್ವತಮ್ಮನ ಸಂಗಡ ಜಗಳ ಆಡಿಬಿಡಲೆ, ಎನ್ನಿಸಿಬಿಟ್ಟಿತ್ತು. ಮಲಮಗಳಾದ ಮಾತ್ರಕ್ಕೆ ಇವಳ ಗುಲಾಮಳೇನು? ಅಬ್ಬ! ಅದೂ ಲಕ್ಷಣವಾಗಿ ಊಟಕ್ಕೆ ಕರೆದರೆ, ಹೋಗಬೇಡ ಎಂದು ತಡೆಯುವುದೆ? ಎಂದಾದರೂ ಒಂದೊಂದು ದಿನ ನಮ್ಮ ಮನೆಗೆ ಸಿಹಿನೀರಿಗೆ ಬರುತಾಳೆ. ಆಗ ತೀರಿಸುತೇನೆ. ಬಾ, ಕುಳಿತುಕೊ. ತೆಗೆದುಕೋಮ್ಮ, ನಮನ್ನೆಲ್ಲ ಮರೆಯಬೇಡ" ಎನ್ನುತ್ತಾ ಎಲೆ ಅಡಕೆ, ತೆಂಗಿನಕಾಯಿ, ಜರಿಯಕುಪ್ಪಸದ ಕಣ–ಇವುಗಳಿದ್ದ ತಟ್ಟೆಯನ್ನು ಕೈಗೆ ನೀಡಿದಳು.

ಸೀತಮ್ಮನಿಗೆ ಆಶ್ಚರ್ಯವಾಯಿತು. " ನನಗೇಕಿಷ್ಟೊಂದು ಮರ್ಯಾದೆ, ಶಂಕರಮ್ಮ? ಅಯ್ಯೊ, ಅಯ್ಯೊ, ಇದೆಲ್ಲ ಏಕೆ?" ಎಂದಳು.

" ಹಾಗೆನ್ನಬಾರದು. ನಾನು ನಿನಗೆ ಮರ್ಯಾದೆ ಮಾಡುತಿಲ್ಲ ನಿನ್ನ ಮೇಲಿನ ಪ್ರೀತಿಗಾಗಿ ಉಡುಗೊರೆ ಕೊಡುತಿದೇನೆ. ನೀನು ಅದನ್ನು ತೆಗೆದುಕೊಂಡರೆ, ನನ್ನ ಮನಸ್ಸಿಗೆ ಸಂತೋಷ. ಇದನ್ನು ಮಗುವಿಗಾಗಿ ಕೊಡುತಿದೇನೆ. ತೆಗೆದುಕೊ" ಎಂದು ಅದೇ ತಟ್ಟೆಯೊಳಗೆ ಒಂದು

ರೂಪಾಯಿ ಇಡುತ್ತ ಹೇಳಿದಳು.

ಸೀತಮ್ಮ ಮರುಮಾತಾಡದೆ ಕುಂಕುಮ ಹಚ್ಚಿಕೊಂಡು ಉಡುಗೊರೆ ತೆಗೆದುಕೊಂಡಳು.

“ ಈಗಿನ ಮಗುವಿನ ಅದೃಷ್ಟದಿಂದಲಾದರೂ ನಿಮ್ಮತ್ತೆ ಮಾವಂದಿರಿಗೆ ಒಳ್ಳೆಯ ಬುದ್ಧಿ ಬರಲಮ್ಮ. ನಡತೆ ಸರಿಯಾಗಲಿ. ನಿನಗೆ ಸುಖವಾಗಲಿ. ಇದೇ ನನ್ನ ಹಾರೈಕೆ. ನಮ್ಮನ್ನೆಲ್ಲ ಮರೆಯಬೇಡಮ್ಮ” ಎಂದರು.

ಸೀತಮ್ಮ ಎದ್ದು “ ಹೋಗಿ ಬರುತೇನೆ, ಶಂಕರಮ್ಮ. ನಿಮ್ಮಂಥವರನ್ನು ನಾನು ಮರೆಯುವುದು ಕಷ್ಟ. ಆದರೆ ನನ್ನಂಥವಳನ್ನು ನೀವು ಮರೆಯುವುದು ಸುಲಭ. ಮರೆಯಬೇಡಿ. ನಾನು ಬರುತೇನೆ ” ಎಂದು ನಮಸ್ಕಾರ ಮಾಡಿ ಲಲಿತಮ್ಮನವರ ಮನೆಗೆ ಹೋದಳು. ಅವರೂ ತೆಂಗಿನಕಾಯಿ ಉಡುಗೊರೆ ಕೊಟ್ಟರು.

ಅಲ್ಲಿಂದ ತುಳಸೀಬಾಯಿಯ ಮನೆಗೆ ಬಂದಳು. ತುಳಸೀಬಾಯಿ ನಡಸಿದ ಎಂಟು ದಿನದ ಶುಶ್ರೂಷೆ ಎಂದೆಂದಿಗೂ ಮರೆಯಲಸಾಧ್ಯ. ಸೀತಮ್ಮ, ತನ್ನ ಭಾಗಕ್ಕೆ ಆಕೆಯೇ ಹೆತ್ತ ತಾಯಿ ಎಂದುಕೊಂಡಿದ್ದಳು. ಈಕೆ ಬಂದುದನ್ನು ನೋಡಿ ತುಳಸೀಬಾಯಿ ಆನಂದದಿಂದ, ಹಾಸಿದ್ದ ಚಾಪೆಯನ್ನು ತೋರಿಸಿ “ ಕುಳಿತುಕೊ ಸೀತಮ್ಮ, ಮಕ್ಕಳೆಲ್ಲ ಎಲ್ಲಿ ? ” ಎಂದಳು.

“ ಮನೆಯಲ್ಲಿದಾರೆ.”

“ ಇಲ್ಲ, ಅವರೂ ಬರಲಿ. ಸರೋಜ, ಸೀತಮ್ಮನ ಮಕ್ಕಳನ್ನು ಕರೆದು ಬಾರಮ್ಮ ” ಎಂದು, ಮನೆಗೆ ಬಂದಿದ್ದ ಪಕ್ಕದಮನೆಯ ಶೇಷಪ್ಪನ ಮಗಳಿಗೆ ಹೇಳಿದಳು. ಹುಡುಗರು ಬಂದು ಚಾಪೆಯ ಮೇಲೆ ಕುಳಿತರು. ತುಳಸೀಬಾಯಿ ಸರೋಜಳಿಂದ ಕುಂಕುಮ ಕೊಡಿಸಿ, ತಟ್ಟೆ ತುಂಬ ಎಲೆ ಅಡಕೆ, ತೆಂಗಿನಕಾಯಿ, ದ್ರಾಕ್ಷಿ, ಕಲ್ಲುಸಕ್ಕರೆ, ಬಾದಾಮಿ ಇಟ್ಟು ಸೀತಮ್ಮನಿಗೆ ಉಡುಗೊರೆ ಕೊಟ್ಟಳು. ಆಕೆಗೆ ಅದನ್ನು ನೋಡಿ ಮಾತೇ ಹೊರಡಲಿಲ್ಲ. ದುಃಖ ಬಂದುಬಿಟ್ಟಿತು. ಸರೋಜ ಒಳಗಿನಿಂದ ಬಾಳೆಹಣ್ಣು ತಂದು ಹುಡುಗರಿಗೆಲ್ಲ ಕೊಡುತ್ತಿದ್ದಳು. ತುಳಸೀಬಾಯಿಗೆ ಸೀತಮ್ಮನ ಕಣ್ಣಿನ ನೀರು ಕಾಣಿಸಿತು. ಕಾರಣ ತಿಳಿಯಲಿಲ್ಲ. ತನ್ನ ಕಣ್ಣಿನಲ್ಲಿಯೂ ನೀರು ತುಂಬಿತು. ಅಗಲುವ ದುಃಖವೊ, ಏನೊ !

"ತುಳಸೀಬಾಯಿ, ನಾನು ನಿಮ್ಮನ್ನು ಹೇಗೆ ಮರೆಯಲಿ, ತಾಯಿ: ಹುಟ್ಟಿದಂದಿನಿಂದ ಕಷ್ಟದಲ್ಲಿಯೇ ಬಿದ್ದಿದ್ದವಳಿಗೆ ಎಂಟು ದಿನದ ನಂಟು ಎಷ್ಟು ಸುಖವಾಗಿತ್ತು! ನನ್ನ ಭಾಗಕ್ಕೆ ತಾವೇ ತಾಯಿ, ತವರು, ದೇವರು. ನಿಮ್ಮ ಋಣ ಎಂದಿಗೆ ತೀರಿಸೇನು"

"ಅಯ್ಯೋ, ಋಣ ಎಲ್ಲಿ ಬಂತು ಸೀತಮ್ಮ. ಯಾವ ಜನ್ಮದಲ್ಲಿ ನಾನು ನಿನಗೆ ತೀರಿಸಬೇಕಾಗಿತ್ತೊ, ಎಂದು ನನಗನ್ನಿಸುತಿದೆ. ಅದೆಲ್ಲ ಮನುಷ್ಯನ ಭ್ರಾಂತಿ. ಯಾರು ಯಾರಿಗೂ ಋಣ ತೀರಿಸಬೇಕಾಗಿಲ್ಲ. ಕಾಲಕ್ಕೆ ತಕ್ಕಂತೆ, ಸನ್ನಿವೇಶಕ್ಕೆ ತಕ್ಕಂತೆ ಮನುಷ್ಯರು ನಡೆದುಕೊಳ್ಳು ತಾರೆ. ಎಲ್ಲ ಒಂದೊಂದು ಪಾತ್ರ—ಮೊನ್ನೆ ಪುರಾಣದಲ್ಲಿ ಹೇಳಿದರಲ್ಲ, ಹಾಗೆ. ನನ್ನದೇನಿದೆ ಸೀತಮ್ಮ?........ಈ ಮುದುಕಿಯನ್ನು ಮರೆಯ ಬೇಡಮ್ಮ. ನಿನ್ನ ಮಕ್ಕಳು ದೊಡ್ಡವರಾದಮೇಲೆ ಇದೇ ಕಷ್ಟ ಇರು ತದೆಯೆ? ಸುಖ ಬಂದೇ ಬರುತದೆ. ಈಗ ಹುಟ್ಟಿರುವ ಹುಡುಗನ ಅದೃಷ್ಟ ದಿಂದ ನಿಮ್ಮತ್ತೆ ಮಾವನವರಿಗೆ ದೇವರು ಒಳ್ಳೆಯ ಬುದ್ಧಿ ಕೊಡಲಪ್ಪ. ಈ ರೂಪಾಯಿ ತೆಗೆದುಕೊ, ನಿನ್ನ ಮಗುವಿನದು"

"ಈಗ ಕೊಟ್ಟಿರುವುದು ಸಾಲದೆ, ತುಳಸೀಬಾಯಿ?"

"ಚೆನ್ನಾಗಿ ಹೇಳಿದೆ! ನಾನು ಈಗ ಕೊಡುತಿರುವುದು ನಿನ್ನ ಮಗುವಿನದು: ಅನಂತನದು. ನೀನು ಹೇಗೆ ಬೇಡ, ಎನ್ನುತೀಯೆ? ಅವನ ಬಾಯಿಂದ ಹೇಳಿಸು, ನೋಡೋಣ!........ತೆಗೆದುಕೊ" ತುಳಸೀ ಬಾಯಿ ನಕ್ಕಳು.

ಸೀತಮ್ಮನಿಗೆ ಸ್ವಲ್ಪ ನಗು ಬಂತು. ರೂಪಾಯಿಯನ್ನೂ ತೆಗೆದು ಕೊಂಡು "ನಾನು ಹೋಗಿ ಬರುತೇನೆ, ತುಳಸೀಬಾಯಿ. ಮರೆಯಬೇಡಿ. ನಿಮ್ಮನ್ನಗಲಬೇಕೆಂದರೆ ನನಗೆ ತುಂಬ ದುಃಖ" ಎಂದಳು.

"ಒಬ್ಬರನ್ನೊಬ್ಬರು ಅಗಲುವಾಗ ಅಳಬಾರದಂತೆ, ಸೀತಮ್ಮ. ನಕ್ಕಿ ದೀಯ. ನಗುತಲೇ ಹೋಗಿಬಾ. ಈ ನಗು ಎಂದೆಂದಿಗೂ ಇರಲಿ. ಹೋಗಿ ಬಾರಮ್ಮ. ಗುರುತಿರಲಿ."

ಸೀತಮ್ಮ ಮಕ್ಕಳೊಡನೆ ಬೇಗನೆ ಮನೆಗೆ ಬಂದಳು. ಬಾಗಿಲಲ್ಲಿ ಗಾಡಿ ಬಂದು ನಿಂತಿತ್ತು. ಹನುಮಣ್ಣ ಎತ್ತುಗಳೊಂದಿಗೆ ಬಂದುಬಿಟ್ಟಿದ್ದ. ಕಟ್ಟೆಯ ಮೇಲೆ ಗೋವಿಂದರಾಯರು ಪಂಚಾಂಗ ಹಿಡಿದು ನಿಂತಿದ್ದರು. ಮಗಳನ್ನು ನೋಡಿ,

"ಎಷ್ಟು ಹೊತ್ತಮ್ಮ. ಮೂರೂಕಾಲಾಯಿತು. ನೀನು ಊರಿಗೆಲ್ಲ ಹೇಳಿಕೊಂಡು ಬರುವುದಕ್ಕೆ ಆರು ತಿಂಗಳು ಬೇಕು" ಎಂದು ಸಿಟ್ಟಿನಿಂದ ಹೇಳಿದರು. ಬಾಗಿಲೊಳಗೆ ಕುಳಿತಿದ್ದ ಪಾರ್ವತಮ್ಮ ಸೀತಮ್ಮನ ಕೈಯೊಳಗಿದ್ದ ಉಡುಗೊರೆಗಳನ್ನು ನೋಡಿ "ಎಲ್ಲರ ಮನೆಯಲ್ಲಿಯೂ ಕೊಡುವುದನ್ನು ಸಂಪಾದಿಸಿಕೊಂಡು ಬರಬೇಕಲ್ಲ?" ಎಂದು, ಹಾಕುತ್ತಿದ್ದ ಹೊಲಿಗೆಯ ಕಡೆಯೆ ತಿರುಗಿಕೊಂಡು ಹೊಟ್ಟೆಕಿಚ್ಚಿನ ಮಾತಾಡಿದಳು. ಸೀತಮ್ಮ ಅಂಥ ಮಾತಿಗೆ ಉತ್ತರ ಕೊಟ್ಟು ಉರಿ ಎಬ್ಬಿಸುವಳಲ್ಲ.

ಒಂದು ತೆಂಗಿನಕಾಯಿಯನ್ನು ಮಾತ್ರ ಶಾಸ್ತ್ರಕ್ಕೆ ತೆಗೆದುಕೊಂಡು, ಎಲೆಅಡಕೆ ಉಳಿದ ಕಾಯಿಗಳನ್ನೂ, ಬಾಳೆಹಣ್ಣಿನ ಚಿಪ್ಪೊಂದನ್ನೂ ಪಡಸಾಲೆಯಲ್ಲಿಟ್ಟಳು. ಉಳಿದುದನ್ನು ಕಣದೊಂದಿಗೆ ಕೈಚೀಲದಲ್ಲಿರಿಸಿಕೊಂಡಳು.

ಗಾಡಿಯಲ್ಲಿ ಹಾಸಿದ ಹುಲ್ಲಿನ ಮೇಲೆ ತಡಿ ಹಾಕಿ, ಸಾಮಾನುಗಳನ್ನಿರಿಸಿದ್ದಾಯಿತು. ಲಲಿತ, ತಾಯಿಯ ಕೈಯೊಳಗಿದ್ದ ಕೈಚೀಲವನ್ನು ಗಾಡಿಯಲ್ಲಿಟ್ಟಳು. ಸೀತಮ್ಮ ತೊಟ್ಟಿಲಲ್ಲಿದ್ದ ಮಗುವನ್ನೆತ್ತಿಕೊಂಡು ಮಾವನ ಮನೆಯ ರೈಲುತಂಬಿಗೆಯೊಡನೆ ಹೊರಗೆ ಬಂದಳು.

ಗಾಡಿಯೊಳಗೆ ಮಕ್ಕಳೆಲ್ಲ ಕುಳಿತರು. ಬಾಣಂತಿಯು ಮಗುವನ್ನು ಲಲಿತಳ ಕೈಯಲ್ಲಿ ಕೊಟ್ಟು, ಗಾಡಿ ಹತ್ತಿ ಮಗುವನ್ನೆತ್ತಿಕೊಂಡಳು. ಸುಬ್ಬಣ್ಣ ಮನೆಯಲ್ಲಿರಲಿಲ್ಲ. ಗೋವಿಂದರಾಯರು ಪಂಚಾಂಗ ಹಿಡಿದೇ ನಿಂತಿದ್ದರು. ಗಾಡಿ ಹೊರಡುವ ಹೊತ್ತಿಗೆ ಅದರ ಹತ್ತಿರ ಬಂದರು. ಸೀತಮ್ಮ "ಹೋಗಿಬರುತೇನಪ್ಪ, ಸುಬ್ಬಣನ ಹೆಂಡತಿ ಮನೆಗೆ ಬಂದುದಕ್ಕೆ ಕಾಗದ ಹಾಕು. ಮರೆಯಬೇಡ. ಹೋಗಿಬಿಟ್ಟು ಬರುತೇನೆ" ಎಂದಳು.

ಗೋವಿಂದರಾಯರಿಗೆ ಕೇಳಿಸಿತೊ ಇಲ್ಲವೊ ತಿಳಿಯದು. "ಹನುಮಣ್ಣ, ನಾಳೆ ಬಂದುಬಿಡು. ನಾಡಿದ್ದು ನಾವೆಲ್ಲ ಶಿವನೂರು ಜಾತ್ರೆಗೆ ಹೋಗಬೇಕು" ಎಂದು ಹೇಳುತ್ತಾ ಗಾಡಿಯ ಮುಂದೆ ಹೋದರು; ಮತ್ತೆ ಹಿಂದೆ ಬಂದರು. "ಅಪ್ಪಾ, ನಾನು ಹೋಗಿಬಿಟ್ಟು ಬರುತೇನೆ" ಎಂದು ಮತ್ತೆ ಮಗಳು ಹೇಳಿದಳು. ಗೋವಿಂದರಾಯರ ಬಾಯಿಂದ 'ಒಳ್ಳೆಯದು' ಹೊರಟಿತು. ಗಾಡಿಯ ಚಕ್ರ ಉರುಳಿತು.

ಎರಡು ತಲೆಮಾರಿನಿಂದ ಹನುಮಣ್ಣನ ಮನೆತನ ಗೋವಿಂದರಾಯರ ರೈತಕೆಲಸ ಮಾಡುತ್ತಿತ್ತು. ಹನುಮಣ್ಣ ಹಣ್ಣುಮುದುಕ. ಆದರೆ ಶ್ರಮ

ಜೀವಿ. ಗಟ್ಟಿಮುಟ್ಟಾಗಿದ್ದಾನೆ. ವಯಸ್ಸು ಅರುವತ್ತೈದರ ಮೇಲಾಗಿದೆ. ತಲೆಕೂದಲೊಳಗೆ ಕರಿಕೂದಲೊಂದೂ ಸಿಕ್ಕದು. ಚಿನ್ನದ ಕಟ್ಟೆಗೆ ಮೂರು ಮೈಲಿ ದೂರದ ಬೇಡರಕೊಪ್ಪದಲ್ಲಿ ಆತನ ವಾಸ. ಆ ಹಳ್ಳಿಯಲ್ಲಿಯೇ ಗೋವಿಂದರಾಯರ ಹೊಲ ತೋಟ ಎಲ್ಲವೂ ಇರುವುದು. ಮೊದಲಿಂದಲೂ ಅವೆಲ್ಲವನ್ನೂ ಈತನೊಬ್ಬನೇ ನೋಡಿಕೊಳ್ಳುತ್ತಿದ್ದಾನೆ. ಫಸಲಿನ ಕಾಲದಲ್ಲಿ ಮಾತ್ರ ಇಬ್ಬರು ಆಳುಗಳನ್ನು ನೇಮಿಸಿಕೊಳ್ಳುತ್ತಾನೆ. ಗೋವಿಂದರಾಯರೂ ಆತನನ್ನು ಪ್ರೀತಿಯಿಂದ ಕಾಣುತ್ತಾರೆ. ಆದರೆ ಸಂಸಾರದಲ್ಲಿ ಬಲು ಕಷ್ಟಪಟ್ಟುಬಿಟ್ಟಿದ್ದ. ಇದ್ದೊಬ್ಬ ಮುದಿತಾಯಿ ಹುಚ್ಚು ಹಿಡಿದು ಎಲ್ಲಿಯೋ ಹೊರಟುಹೋದಳು. ಪಡಲಾರದ ಕಷ್ಟಗಳನ್ನೆಲ್ಲ ಸಹಿಸಿ, ಕೊನೆಗೆ ಒಬ್ಬಂಟಿಗನಾಗಿಬಿಟ್ಟ.

ಚಿನ್ನದಕಟ್ಟೆಯಿಂದ ಗಾಡಿ ಮುಕ್ಕಾಲು ಮೈಲಿ ಸಾಗಿತ್ತು. ದೊಡ್ಡ ಕೆರೆ ಕಾಣಿಸಿತು. ಸೀತಮ್ಮನಿಗೆ ಆಗ ನೀರಿನ ಜ್ಞಾಪಕ ಬಂತು. "ಲಲಿತ, ರೈಲುತಂಬಿಗೆಯಲ್ಲಿ ನೀರಿದೆಯೆ?" ಎಂದು ಕೇಳಿದಳು. ಮಗಳು ನೋಡಿ "ಇಲ್ಲ, ಇಳಿದು ತುಂಬಿಕೊಂಡು ಬರುತೇನೆ" ಎಂದು ಕೆಳಗಿಳಿದು ಕೆರೆಯ ಕಡೆ ಹೋದಳು. ಗಾಡಿ ನಿಂತಿತ್ತು.

ಎಡಭಾಗದಲ್ಲೊಂದು ಗುಡ್ಡ. ಗುಡ್ಡದ ಮೇಲೊಂದು ಹಾಳು ಕಟ್ಟಡ. ಅದರ ಮೇಲೊಂದು ಹರಿದ ಬಾವುಟ ಗಾಳಿಗೆ ಆಡುತ್ತಿತ್ತು. "ನೀವು ಯಾವತ್ತಾದರೂ ಈ ಗುಡ್ಡಕ್ಕೆ ಹೋಗಿದೀರ ತಾಯಿ?" ಎಂದು ಹನುಮಣ್ಣ ಕೇಳಿದ.

"ಇಲ್ಲಪ್ಪ" ಎಂದು ಸೀತಮ್ಮ ಉತ್ತರವಿತ್ತಳು.

"ನಿಮ್ಮ ತಾಯಿ ಕಳಿಸಾಳೆ? ಚಿಕ್ಕಂದಿನಲ್ಲಿಯೂ ಹೋಗಿಲ್ಲವೆ?"

"ಇಲ್ಲಪ್ಪ, ಹೀಗೇ ಊರಿಗೆ ಹೋಗುತ ಪ್ರತಿಸಲವೂ ಅದನ್ನು ನೋಡುತೇನೆ. ಅಂಥ ಗುಡ್ಡದ ಗುಡಿಗಳು ಬೇಕಾದಷ್ಟಿರುತವೆ, ಅಂದುಕೊಂಡು ಸುಮ್ಮನೆ ಹೊರಟುಬಿಡುತೇನೆ. ಅದು ಯಾವ ದೇವಸ್ಥಾನ? ನೀನು ಮುದುಕ. ಎಲ್ಲ ಕತೆಯನ್ನೂ ಚೆನ್ನಾಗಿ ಹೇಳಿಬಿಡುತೀಯೆ. ಹತ್ತಿರದಲ್ಲಿ ಲಂಬಾಣಿ ತಾಂಡಗಳಿರುವುದರಿಂದ ಲಂಬಾಣಿಗಳದೋ, ಎಂದುಕೊಂಡಿದೇನೆ."

ಮಗಳು ನೀರಿನೊಂದಿಗೆ ಬಂದು ಗಾಡಿ ಹತ್ತಿದಳು.

"ಅದು ಎಲ್ಲ ದೇವರ ಹಾಗಲ್ಲ. ಕತೆ ಬಹಳ ಸ್ವಾರಸ್ಯವಾಗಿದೆ.

ಹೇಳುತೀನಿ" ಎಂದು ಹೇಳುತ್ತಾ ಎತ್ತಿನ ಮೇಲೆ ಕೈಯಾಡಿಸಿದ. ಗಾಡಿ ಹೊರಟಿತು. ದೇವರ ಕತೆ ಶುರುಮಾಡಿದ:

"ಇದು ಬಹಳ ಹಳೆಯ ದೇವರಂತೆ. ಈಶ್ವರ ದೇವಾಲಯ. ಈಗ ಅಲ್ಲೊಬ್ಬರು ಋಷಿಗಳಿದಾರೆ. ಮೇಲೆ ಮೂರು ಗುಹೆಗಳಿವೆ. ಒಂದರಲ್ಲಿ ಅವರು ವಾಸಮಾಡುತಾರೆ. ಇನ್ನೊಂದು ಗುಹೆ ಬಹಳ ಹೆಸರುವಾಸಿ. ಅದರೊಳಗೆ ಧೈರ್ಯದಿಂದ ಸ್ವಲ್ಪದೂರ ಹೋದರೆ ಒಂದು ಬಾವಿ ಸಿಕ್ಕುತದೆ. ಆ ಬಾವಿಯಿಂದ ಎಡಕ್ಕೆ ಹೊರಡುವ ರಸ್ತೆಯಲ್ಲಿ ಹೊರಟರೆ ಕಾಶಿಗೆ ಹೋಗಬಹುದಂತೆ! ಬಲಕ್ಕೆ ಹೊರಟರೆ ರಾಮೇಶ್ವರ ಸಿಕ್ಕುವುದಂತೆ! ಮೂರನೆಯ ಗುಹೆಯಲ್ಲಿ ಯಾರೂ ಪ್ರವೇಶ ಮಾಡಲಾರರು, ದುರ್ವಾಸನೆ. ಅಲ್ಲಿ ಹುಲಿಗಳು ವಾಸವಾಗಿವೆಯಂತೆ. ಆದರೆ ಆ ಋಷಿಗೆ ಮಂತ್ರ ಬರುವುದರಿಂದ ಅವನನ್ನು ಅವು ಏನೂ ಮಾಡುವುದಿಲ್ಲವಂತೆ ಆತನಿಗೆ ನೂರೈವತ್ತು ವರುಷವಂತೆ. ಯೋಗಾಭ್ಯಾಸ ಮಾಡಿರುವುದರಿಂದ ಇನ್ನೂ ಚಿಕ್ಕವನಾಗಿಯೇ ಕಾಣುತಾನೆ. ಆದರೆ ಅವನು ಈ ಗುಹೆಯಲ್ಲಿರುತ ನಾ ಕಂಡ ಹಾಗೆ ಹತ್ತು ವರುಷಗಳಾದುವು. ಅವನಿಗೆ ಸ್ವಪ್ನವಾಯಿತಂತೆ—ಈ ಗುಹೆಯಲ್ಲಿ ಬಂದು ವಾಸಮಾಡು, ಎಂದು. ನೀವು ಹೇಳಿದ ಹಾಗೆ ಲಂಬಾಣಿಗಳೇ ಅಲ್ಲಿಗೆ ಹೆಚ್ಚಾಗಿ ಹೋಗುವುದು. ಒಡ್ಡರೂ ಹೋಗುತಾರೆ. ವರುಷಕ್ಕೊಮ್ಮೆ ಜಾತ್ರೆ ನಡೆಯುತದೆ. ಈಗ ಹತ್ತು ವರುಷದಿಂದ ಆ ಋಷಿಯೇ ಶಿವಪೂಜೆ ಮಾಡುವುದು.

"ದೇವಾಲಯದ ಸುತ್ತ ದೊಡ್ಡ ಕೈಸಾಲೆಯಿದೆ. ಸಾವಿರ ಜನಕ್ಕೆ ಎಲೆ ಹಾಕಬಹುದು. ಎಡಭಾಗದಲ್ಲಿ 'ಭೂತನ ಕೋಣೆ' ಎಂಬುದಿದೆ. ಅದರೊಳಗೆ ಪ್ರತಿವರ್ಷವೂ ಉತ್ಸವಕ್ಕೆ ಮುಂಚೆ, ಹದಿನೈದು ಜನ ಮುತ್ತೈದೆಯರು ರುಚಿರುಚಿಯಾದ ಭಕ್ಷ್ಯಗಳನ್ನು ಮಾಡಿ ನೂರೊಂದು ಎಡೆಯಿಟ್ಟು ಹಿಮ್ಮುಖನಾಗಿಯೆ ಹೊರಗೆ ಬಂದಬಿಡುತಾರೆ. ಬೆಳಗ್ಗೆ ಎದ್ದು ನೋಡುವಾಗ ಎಡೆಯೊಳಗಿದ್ದ ತೆಂಗಿನಕಾಯಿಯ ತಿರುಳನ್ನೆಲ್ಲ ಭೂತ ತಿಂದು ಬರಿಯ ಬುರುಡೆಯನ್ನು ಬಿಟ್ಟಿರುತದೆ. ನೂರೊಂದು ಎಲೆಯಲ್ಲಿಯೂ ಒಂದು ಅಗಳೂ ಅಂಟಿರದಂತೆ ಹೊಡೆದುಬಿಟ್ಟಿರುತದೆ. ಭೂತನ ಊಟ ನಡೆಯದಿದ್ದರೆ ಆ ಸುತ್ತಮುತ್ತ ಹಳ್ಳಿಗೆ ಏನಾದರೂ ತೊಂದರೆ ಇದ್ದೇ ಇರುತದೆ" ಎಂದ.

ಕತೆ ಕೇಳುತ್ತಿದ್ದ ಸೀತಮ್ಮ "ಹತ್ತು ವರುಷದ ಹಿಂದೆ ಇದೆಲ್ಲ ನಡೆಯುತಿರಲಿಲ್ಲವೆ?" ಎಂದಳು.

"ಇಲ್ಲ"

"ಹಾಗಾದರೆ ಆಮೇಲೆ ಈ ಸುತ್ತಮುತ್ತ ಇರುವ ಜನ ದೇವರಿಗೇನು ಪಾಪ ಮಾಡಿದರು? ಎಲ್ಲ ಬರಿಯ ಭ್ರಾಂತಿ. ದೇವರನ್ನು ನಂಬಿದಷ್ಟೂ ಕಷ್ಟವೇ ಹೆಚ್ಚು. ಏಕೆ ಇಷ್ಟೊಂದು ಪೂಜೆಪುರಸ್ಕಾರ ನಡಸುತಾರೊ! ದೇವರು ಇದ್ದರೆ ಮನುಷ್ಯನ ಜೀವನದಲ್ಲಿ ಹೀಗೆ ಮೇಲುಕೀಳುಗಳಿರುತಿದ್ದುವೆ? ಮನುಷ್ಯ ಅಹಂಕಾರದ ಮದದಿಂದ ಸ್ವೇಚ್ಛೆಯಾಗಿ ಕುಣಿಯಲು ಸಾಧ್ಯವೆ?........ಕಷ್ಟಪಡುವವರ ಪೂರ್ವಜನ್ಮದ ಕರ್ಮ, ಎನ್ನಬಹುದು. ಆದರೆ, ಅದಕ್ಕೆ ಪ್ರಾಯಶ್ಚಿತವಿಲ್ಲವೇನು? ಈ ಕರ್ಮ ತೀರಿಸುವ ಸಂಪತ್ತಿನಲ್ಲಿ, ಕರ್ಮ ತೀರಿಸುವವರು ಸಾವಿರ ತಪ್ಪು ಮಾಡಿಬಿಡುತಾರಲ್ಲ! ಮಿತಿಯಿಲ್ಲದ ದಂಡನೆಗೈಯುತಾರೆ. ಪುನಃ ಅವರು ಕರ್ಮ ಕಳೆಯಲು ಮುಂದಿನ ಜನ್ಮ ತಾಳಬೇಕು. ದೇವರು ಎಲ್ಲಿದಾನೆ ಹನುಮಣ್ಣ! ನನಗೇನೋ ಬಹಳ ಬೇಸರವಾಗಿದೆಯಪ್ಪ"

"ಇಲ್ಲ ತಾಯಿ. ನಾವು ಹಾಗೆನ್ನುವುದಕ್ಕಾಗುವುದಿಲ್ಲ. ಇದೇ ದೇವಸ್ಥಾನದಲ್ಲಿ ಈಗ ಇಪ್ಪತ್ತು ವರುಷಗಳ ಹಿಂದೆ ಯಾರೂ ಹೋಗುತಿರಲಿಲ್ಲ. ಸುತ್ತ ಗಿಡ ಬೆಳೆದುಬಿಟ್ಟಿತ್ತು. ಕಲ್ಲಿನ ಕೆಲಸವೆಲ್ಲ ಮಣ್ಣುಗೂಡಿತ್ತು. ಆಗ ಈ ಪಕ್ಕದ ಊರಿನ ಇಬ್ಬರು ಸಾಬರು ನವರತ್ನದ ಮೇಲಿನ ಆಸೆಯಿಂದ ಲಿಂಗ ಒಡೆಯಲು ನಿಶ್ಚಯಿಸಿದರು. ಇದು ಮಹಮಹಾಋಷಿಗಳು ಪ್ರತಿಷ್ಠೆ ಮಾಡಿಸಿದ ದೇವರಂತೆ. ಪ್ರತಿಷ್ಠೆ ಮಾಡುವಾಗ ನವರತ್ನ ಇಡುತಾರಂತಲ್ಲ, ತಾಯಿ? ಅದನ್ನು ಸಂಪಾದಿಸಬೇಕೆಂದು ಒಂದು ರಾತ್ರಿ ಸಾಬರು ಹಾರೆ, ಮಚ್ಚು, ಕತ್ತಿ, ಬಂದೂಕುಗಳೊಡನೆ ಅಲ್ಲಿಗೆ ಹೋದರು. ದೊಡ್ಡ ಪಂಜಿನ ಬೆಳಕಿನಲ್ಲಿ ಗರ್ಭಗುಡಿ ಹೊಕ್ಕಕೂಡಲೆ ಇಬ್ಬರಿಗೂ ತುಂಬ ಹೆದರಿಕೆಯಾಯಿತಂತೆ. ಆದರೂ ಧೈರ್ಯ ಮಾಡಿಕೊಂಡು ಕೊಡಲಿಯಲ್ಲಿ ಒಂದು ಹೊಡೆತ ಹಾಕಿದರಂತೆ. ಅದೇನಾಯಿತೊ! ಇಬ್ಬರಿಗೂ ತಕ್ಷಣವೆ ಮೂರ್ಛೆ ಬಂದುಬಿಟ್ಟಿತು. ಬೆಳಗ್ಗೆ ನೋಡುವಾಗ ಎರಡು ಹೆಣ ಬಿದ್ದಿದ್ದುವು. ಸಾಬರು ಈಗಲೂ ಹೆದರುತಾರೆ. ದೇವರಿಲ್ಲದಿದ್ದರೆ ಹಾಗೆ

ನಡೆಯುತಿತ್ತೆ? ದೇವರಿಲ್ಲದೆ ಈ ಪ್ರಪಂಚ ಎಲ್ಲಿದೆ, ತಾಯಿ. ದೇವರು ಎಂಥ ಮಹಾಪುರುಷ!

"ಈ ಪ್ರಪಂಚವನ್ನು ಹೇಗೆ ಮಾಡಿದಾನೆ! ಅದರಲ್ಲಿಯೂ ಈ ಮನುಷ್ಯ ಮುಖ್ಯ. ಅಬ್ಬ! ಮಾಯ ಮಂತ್ರ ಮಾಡಿದ ಹಾಗೆ ಈ ಜೀವಿಗೆ ವಿಚಿತ್ರವಾಗಿ ಕೈಕಾಲು, ಮೈ, ತಲೆ–ಇವುಗಳನ್ನೆಲ್ಲ ಕೊಟ್ಟಿದಾನೆ. ನಡೆಯಲು ಕಾಲು; ಒಂದು ಕಾಲು ಉದ್ದವಾದರೆ ಕಷ್ಟ, ಗಿಡ್ಡವಾದರೆ ಕಷ್ಟ. ಬೆರಳಿನ ತುದಿಗಳಲ್ಲಿ ಅಪಾಯವಾಗದಂತೆ ಉಗುರು. ಜೀವ ಇಲ್ಲದ ಚಪ್ಪಲಿ ಎಷ್ಟು ಬೇಗ ಸವೆದುಹೋಗುತದೆ. ಆದರೆ ಜೀವ ಇರುವ ಈ ಅಂಗಾಲು ಎಷ್ಟು ನಡೆದರೂ ಸವೆಯುವಂತಿಲ್ಲ. ಊಟ, ಕೆಲಸಗಳನ್ನು ಮಾಡಲು ಕೈ ಕೊಟ್ಟಿದಾನೆ. ಅನ್ನ ಕಲಸುವುದಕ್ಕೆ ಬೆರಳುಗಳನ್ನೂ ಕೊಟ್ಟಿದಾನೆ. ಐದು ಬೆರಳಲ್ಲಿ ಯಾವುದು ಇಲ್ಲದಿದ್ದರೂ ಕಷ್ಟ. ಉಗುರುಗಳೂ ಬಹಳ ಸಹಾಯಮಾಡುತವೆ........ಆಮೇಲೆ—ಈ ಮೈ ಕೊಟ್ಟಿದಾನೆ. ಊಟ ಮಾಡಿದುದು ಕರಗಲು ಹೊಟ್ಟೆ, ಉಸಿರಾಡುವುದಕ್ಕೆ ಎದೆ........ಎಲ್ಲಕ್ಕಿಂತಲೂ ಮುಖ್ಯವಾದುದು ಈ ತಲೆ! ಇದು ಎಷ್ಟು ವಿಚಿತ್ರವಾಗಿ ತಯಾರಾಗಿದೆ! ಕೃಷ್ಣಪರಮಾತ್ಮ ಬಾಯೊಳಗೆ ವಿಶ್ವರೂಪ ತೋರಿಸಿದನಂತೆ. ಹಾಗೆಯೆ—ಇಷ್ಟು ಸಣ್ಣ ಮುದ್ದೆಯೊಳಗೆ ಏನೇನು ಚಿತ್ರಿಸಿಬಿಟ್ಟಿದಾನೆ! ನೋಡುವುದಕ್ಕೆ ಕಣ್ಣು, ಕೇಳುವುದಕ್ಕೆ ಕಿವಿ; ವಾಸನೆ ತಿಳಿಯಲು ಮೂಗು, ಮಾತಿಗೆ ಮತ್ತು ರುಚಿಗೆ ನಾಲಗೆ, ಅಗಿಯಲು ಹಲ್ಲು, ಬಾಯಿಗೆ ಕಾವಲಾಗಿ ತುಟಿಗಳು, ಯೋಚನೆಮಾಡಲು ಮಿದುಳು, ತಲೆಯ ಮೇಲೆ ಕೂದಲು—ಇವುಗಳಲ್ಲಿ ಯಾವುದು ಇಲ್ಲದಿದ್ದರೂ ಕಷ್ಟ. ಕಿವಿಯಿಲ್ಲದಿದ್ದರೆ ಕಣ್ಣು ಕೇಳಬಲ್ಲುದೆ? ಮೂಗು ಊಟಮಾಡಬಲ್ಲುದೆ? ಬಾಯಿಗೆ ವಾಸನೆ ತಿಳಿಯುವುದೆ? ನಾಲಗೆ ರುಚಿ ನೋಡದೆ ಹೋದರೆ ಇನ್ನಾವುದು ತಾನೆ ನೋಡಬಲ್ಲುದು? ಅನ್ನ ಹೊಟ್ಟೆಯೊಳಗೆ ಹೋದಮೇಲೆ ರುಚಿ ಗೊತ್ತಾಗುತದೆಯೇನು? ಒಂದೊಂದಕ್ಕೂ ಒಂದೊಂದು ಕೆಲಸ. ಒಂದಕ್ಕೂ ಇನ್ನೊಂದಕ್ಕೂ ಸಂಬಂಧವೇ ಇಲ್ಲ. ಎಷ್ಟು ವಿಚಿತ್ರವಾಗಿದೆ! ನನಗೆ ಒಂದೊಂದು ಸಲ, ದೇವರು ನಮಗೆ ಒಳ್ಳೆಯದನ್ನಾದರೂ ಮಾಡಲಿ ಕೆಟ್ಟದನ್ನಾದರೂ ಮಾಡಲಿ.

ನಮಗೆ ಈ ದೇಹವನ್ನು ಕೊಟ್ಟಿರುವುದಕ್ಕಾದರೂ ಆತನನ್ನು ನಾವು ಎಡ ಬಿಡದೆ ಪೂಜಿಸಬೇಕು, ಎನ್ನಿಸುತದೆ. ಏನು ಮಾಡುವುದು, ತೊಂದರೆ ಬಂದಾಗ ಒಂದೊಂದು ಸಲ ದೇವರಲ್ಲಿದ್ದ ನಂಬಿಕೆಯೇ ಹೊರಟುಹೋಗು ತದೆ. ದೇವರೇ ಇಲ್ಲ, ಎನ್ನಿಸಿಬಿಡುತದೆ. ದೇವರು ಇದ್ದರೆ ಹೀಗೇಕಾಗುತಿತ್ತು? ಎನ್ನಿಸುವುದು ನಿಜ. ನನಗೆ ಹಾಗೆ ಸಾವಿರ ಸಲ ಆಗಿದೆ. ನನ್ನ ಕಷ್ಟ ನಿಮಗೆ ಗೊತ್ತಿಲ್ಲ, ತಾಯಿ. ನನ್ನಷ್ಟು ಕಷ್ಟ ಯಾರೂ ಪಟ್ಟಿಲ್ಲ, ಎಂದುಕೊಂಡಿ ದೇನೆ." ಎಂದು ಹೇಳುತ್ತ ಎತ್ತುಗಳ ಮೇಲೆ ಬಾರುಗೋಲನ್ನಾಡಿಸಿದ. ಸಂಜೆಯಾಗುತ್ತಾ ಬಂದಿತ್ತು. ಕತ್ತಲಾಗುವುದರೊಳಗೆ ಬೇಗಬೇಗ ಹೋಗಿ ಅಡ್ಡರಸ್ತೆಯಲ್ಲಿರುವ ಸಂತೆಗಾಡಿಗಳನ್ನು ಸೇರಿಕೊಂಡುಬಿಡೋಣ, ಎಂದು ಮನಮಾಡಿದ.

"ನನಗೆ ನಿನ್ನ ಕತೆಯನ್ನೇ ಹೇಳಿಲ್ಲ, ಹನುಮಣ್ಣ. ಹೇಳು ಕೇಳೋಣ. ಊರು ತಲಪುವವರೆಗೂ ಇನ್ನೇನು ಮಾಡುವುದು. ಮುಂದೆ ಕೆರೆ ಸಿಕ್ಕರೆ ಅಲ್ಲಿಯೇ ರೊಟ್ಟಿ ತೆಗೆದುಕೊಳ್ಳೋಣ, ಹೇಳು."

"ಇಲ್ಲ ತಾಯಿ. ಮುಂದೆ ಕೆರೆ ಸಿಕ್ಕುವಷ್ಟರಲ್ಲಿ ತುಂಬ ಕತ್ತಲಾಗು ತದೆ. ಆದುದರಿಂದ ರೊಟ್ಟಿ ತಿನ್ನುವುದಕ್ಕೆ ಇದೇ ಒಳ್ಳೆಯ ಜಾಗ" ಎಂದು ಹೇಳುತ್ತ ಗಾಡಿ ನಿಲ್ಲಿಸಿದ.

ಗಾಡಿ ದಿಬ್ಬದ ಮೇಲೆ ನಿಂತಿತ್ತು. ದಿಬ್ಬದ ಕೆಳಗೆ ಎಡಭಾಗದಲ್ಲಿ ದೊಡ್ಡ ಕೆರೆ. ನೀರು ತಿಳಿಯಾಗಿ ಚೆನ್ನಾಗಿತ್ತು. ಚಿನ್ನದ ಕಟ್ಟೆಯಿಂದ ಹದಿ ನಾರು ಮೈಲಿ ಬಂದಿದ್ದರು. ಸೀತಮ್ಮ ಎಲ್ಲರಿಗೂ ಒಂದೊಂದು ರೊಟ್ಟಿ ಕೊಟ್ಟು ತಾನೂ ತೆಗೆದುಕೊಂಡಳು. ಬಾಳೆಯ ಹಣ್ಣಿನ ಜ್ಞಾಪಕ ಬಂತು. ಎಲ್ಲರಿಗೂ ಒಂದೊಂದು ಬಾಳೆಯಹಣ್ಣು ಕೊಟ್ಟಳು. ತಿಂದು ನೀರು ಕುಡಿದು ಗಾಡಿಯನ್ನೇರಿದುದಾಯಿತು. ಗಾಡಿ ಮುಂದೆ ಹೊರಟಿತು. ಒಳ್ಳೆಯ ಬಿಳಿ ಜೊತೆ; ನೋಡುವುದಕ್ಕೆ ಬಹಳ ಸೊಗಸಾಗಿವೆ. ಆನೆಯಂಥ ಎತ್ತುಗಳು. ಆದರೆ ಬೇಗ ಬೇಗ ಹೊರಟುವು.

ಸೀತಮ್ಮ "ನಿನ್ನ ಕತೆ ಶುರು ಮಾಡು ಹನುಮಣ್ಣ" ಎಂದಳು.

ಹನುಮಣ್ಣ ಕತೆ ಹೇಳಲು ಮೊದಲುಮಾಡಿದ. ಗಾಡಿ ಹುಡಿ ಮಣ್ಣಿನ ರಸ್ತೆಯಲ್ಲಿ "ಜೊರ್ರ್ರ್" ಎನ್ನುತ್ತ ಸಾಗುತ್ತಿತ್ತು. ಅಲ್ಲಲ್ಲಿ ಕಲ್ಲು

ಸಿಕ್ಕಿದರೆ, ಗಾಡಿಯ ಕೀಲಿಗೆ ಕಟ್ಟಿದ್ದ ಗೆಜ್ಜೆ "ಝುಣ ಝುಣ" ಶಬ್ದ ಮಾಡುತ್ತಿತ್ತು. ಪಡವಲ ಬಾನಿಗೆ ಹೊಂಬಣ್ಣ ಬಳಿದಿತ್ತು. ಕೆರೆಯ ತಾವರೆ ಮುಖ ಮುಚ್ಚಿಕೊಳ್ಳುತ್ತಿತ್ತು.

"ನಮ್ಮ ತಾಯಿ ತಂದೆ, ನನಗೆ ಬೇಗ ಮದುವೆ ಮಾಡಿಬಿಟ್ಟರು. ಬಹಳ ದಿನಗಳ ಮೇಲೆ ರಾಯರಿಗಿರುವಂತೆಯೇ ನನಗೊಬ್ಬ ಗಂಡುಮಗ ನಾದ. ಆದರೆ ಹೆಣ್ಣುಮಗಳು ಹುಟ್ಟಲಿಲ್ಲ...."

"ನಿನ್ನ ಪುಣ್ಯ, ಹಾಗಾದರೆ" ಎಂದು ಸೀತಮ್ಮ ನಡುವೆ ಮಾತಾಡಿ ದಳು.

"ಇಲ್ಲ ತಾಯಿ. ಪುಣ್ಯವೆಲ್ಲಿ ಬಂತು! ಮಗಳಿದ್ದರೆ ಸುಖದಿಂದಿರುತಿ ದ್ದನೊ ಏನೊ! ನನ್ನ ಹೆಂಡತಿ ಮಗನನ್ನು ಹೆತ್ತು ಮೂರು ತಿಂಗಳೊಳ ಗಾಗಿಯೆ ತೀರಿಕೊಂಡಳು. ನನ್ನ ತಾಯಿ ಸೊಸೆಯನ್ನು ತುಂಬ ಹಚ್ಚಿ ಕೊಂಡಿದ್ದಳು; ಮಗಳಂತೆ ನೋಡುತಿದ್ದಳು. ಸೊಸೆ ಸತ್ತ ಕೂಡಲೆ ಆಕೆಗೆ ಹುಚ್ಚು ಹಿಡಿದುಬಿಟ್ಟಿತು. ಆಗ ಊರಿಗೆ ಅಮ್ಮನ ಖಾಯಿಲೆ ಬೇರೆ. ಆ ಸುಡುಗಾಡು ರೋಗ ನನ್ನ ತಂದೆಯನ್ನು ತಿಂದುಬಿಟ್ಟಿತು. ಮೂರು ತಿಂಗಳ ಬತ್ತಿಯನ್ನು, ಮಕ್ಕಳ ವಿಷಯವೇ ತಿಳಿಯದ ನಾನು ಕಾಪಾಡ ಬೇಕಾಯಿತು. ಗಂಡ ಸತ್ತಮೇಲೆ ನಮ್ಮ ತಾಯಿಯ ಹುಚ್ಚು ಮಿತಿ ಮೀರಿತು. ಒಂದೊಂದು ದಿನ ಗಂಡನ ಗೋರಿಯ ಮೇಲೆ ಅನ್ನ ನೀರಿಲ್ಲದೆ ಮಲಗಿಬಿಡುತಿದ್ದಳು. ಮೂರು ನಾಲ್ಕು ದಿನ ಅಲ್ಲಿಯೇ ಇದ್ದುಬಿಡುತಿ ದ್ದಳು. ಶ್ಮಶಾನಕ್ಕೂ ನಮ್ಮ ಮನೆಗೂ ಒಂದೂವರೆ ಮೈಲಿ. ನಾನು ಮಗು ವನ್ನೂ ನೋಡಿಕೊಳ್ಳಬೇಕಾಗಿತ್ತು; ತಾಯಿಯನ್ನೂ ನೋಡಿಕೊಳ್ಳ ಬೇಕಾಗಿತ್ತು. ನನ್ನ ತಾಯಿ ಒಂದು ದಿನ ಎಂದಿನಂತೆ ಶ್ಮಶಾನಕ್ಕೆ ಹೋದಳು. ಮೂರು ದಿನ ಅಲ್ಲಿಯೇ ಮಲಗಿದ್ದಳು. ಯಾರು ಕರೆದರೂ ಬರಲಿಲ್ಲ. ನನ್ನ ಮಾತನ್ನೂ ಕೇಳುತಿರಲಿಲ್ಲ. ಆಕೆಯ ತಲೆ ತುಂಬ ಕೆಟ್ಟುಹೋಗಿತ್ತು. ನಾಲ್ಕನೆಯ ದಿನ ಗೋರಿಯ ಹತ್ತಿರ ಅನ್ನ ಇಟ್ಟು ಬರಲು ಹೋಗಿದ್ದೆ. ನಾವು ಊಟ ಮಾಡು, ಎಂದರೆ ಮಾಡುತಿರಲಿಲ್ಲ; ಆಕೆ ಎಲ್ಲಿದ್ದರೆ ಅಲ್ಲಿಗೆ ತೆಗೆದುಕೊಂಡು ಹೋಗಿ ಇಡಬೇಕು. ಮನಸ್ಸು ಬಂದಾಗ ಹಸಿವೆಯಾದಾಗ ಅದನ್ನು ತೆಗೆದುಕೊಂಡು ತಿನ್ನುತಿದ್ದಳು. ಆದರೆ ನಾಲ್ಕನೆಯ ದಿನ ಅನ್ನ

ಅಲ್ಲಿಯೇ ಬಿದ್ದಿತ್ತು. ಆಕೆ ಮಾಯವಾಗಿದ್ದಳು. ಸುತ್ತ ಮುತ್ತಿನ ಕಾಡನ್ನೆಲ್ಲ ಶೋಧಿಸಿಬಿಟ್ಟೆ. ಹಳ್ಳಿಗಳಿಗೆಲ್ಲಾ ಹೋಗಿಬಂದೆ. ಸಿಕ್ಕಲೇ ಇಲ್ಲ. ಎಲ್ಲಿಗೆ ಹೋದಳೊ, ಏನೊ. ಇದುವರೆಗೂ ಪತ್ತೆಯಿಲ್ಲ. ನಾನೆಂಥ ಪಾಪಿ. ಹೆತ್ತ ತಾಯಿಯನ್ನಗಲಿದ ರೀತಿ ಹೀಗಿದೆ. ಜೀವದಿಂದಿರುವ ಮಗನಿದ್ದು, ಆಕೆ ಎಷ್ಟೆಷ್ಟು ಕಡೆ ಏನೇನು ಕಷ್ಟಪಟ್ಟುಕೊಂಡು, ಅನ್ನ ನೀರಿಲ್ಲದೆ ತೀರಿಕೊಂಡಳೊ. ಸಾಯುವಾಗ 'ನನಗೆ ಮಗನಿದ್ದಾನೆ' ಎಂದು ನೆನಸಿಕೊಂಡಳೊ, ಇಲ್ಲವೊ....ಅಂತೂ ನಾನೇ ಆಕೆಗೆ ದ್ರೋಹ ಮಾಡಿದೆನೊ, ಏನೊ.

" ಯಾರ ಪಾಡು ಏನೇ ಆಗಲಿ, ದೇವರು ಮನುಷ್ಯನ ಆಸೆಯನ್ನು ಎಷ್ಟು ವಿಚಿತ್ರವಾಗಿ ಮಾಡಿದಾನೆ. ತಾಯಿಯನ್ನಗಲಿದ ಮೇಲೆ ಮೂರು ನಾಲ್ಕು ದಿನ ತುಂಬ ದುಃಖವಾಗಿತ್ತು ; ಏನೂ ಬೇಡವಾಗಿತ್ತು. ಆದರೆ ಎಳೆ ಮಗುವಿನ ತೊಟ್ಟಿಲು ನೋಡಿ ಎಲ್ಲ ಗಮನ ಆಕಡೆ ಹರಿಯಿತು. ನಾನು ರಾಯರ ಹೊಲ ತೋಟ ನೋಡಿಕೊಂಡು ಈ ಕೂಸಿಗೂ ಹೇಗೆ ತಾಯಿಯಾಗಲಿ ! ಆದುದರಿಂದ ನನ್ನ ಗೆಳೆಯ ನಂಜಣ್ಣನ ಸಲಹೆಯಂತೆ ಮನೆಬಾಗಿಲಿಗೆ ಬಂದ ಹೆಣ್ಣೊಂದನ್ನು ಕೂಡಿಕೆ ಮಾಡಿಕೊಂಡೆ. ಆಕೆ ಎರಡು ವರುಷ ಮಗುವನ್ನು ಚೆನ್ನಾಗಿ ಸಾಕಿದಳು. ಆದರೆ ಎಷ್ಟಾದರೂ ಹೊರಗಿನ ಹೆಂಗಸು. ಒಂದು ದಿನ ನನ್ನನ್ನು ಬಿಟ್ಟು ಓಡಿಬಿಟ್ಟಳು. ಆಮೇಲೆ ನಂಜಣ್ಣನ ಮಕ್ಕಳ ಜೊತೆಯಲ್ಲಿ ಮಗು ಬೆಳೆಯಿತು ; ದೊಡ್ಡದಾಯಿತು. ಹತ್ತು ವರುಷದ ಹುಡುಗನಾದ. ಯಾವಾಗಲೊ ಒಂದು ಸಲ ಮಾತ್ರ ಅವನು ನಿಮ್ಮ ಮನೆಗೆ ಬಂದಿದ್ದ. ಹದಿನಾರು ವರುಷಕ್ಕೆ ನಾನು ಮದುವೆ ಮಾಡಿಬಿಟ್ಟೆ. ಒಳ್ಳೆಯ ಕಡೆಯೇ ಹೆಣ್ಣು ಸಿಕ್ಕಿತು. ನಮ್ಮ ಜನರಲ್ಲಿ ತೆರ ಕೊಟ್ಟು ಹೆಣ್ಣು ತರಬೇಕು. ಗಂಡು ಹೆತ್ತವರಿಗೆ ಬಹಳ ಖರ್ಚು. ನಮ್ಮ ಜಾತಿಯ ಜನರನೇಕರು ಹೆಣ್ಣು ಮಕ್ಕಳನ್ನು ಹೆತ್ತು ಸಾವಿರಾರು ರೂಪಾಯಿ ಸಂಪಾದಿಸಿದಾರೆ. ಮಗನ ಮದುವೆಗೆ ಎಂಟುನೂರು ರೂಪಾಯಿ ಖರ್ಚಾಯಿತು. ಅದನ್ನೂ ರಾಯರಲ್ಲಿಯೇ ಸಾಲಮಾಡಿ ತಂದಿದ್ದೆ. ಮೊನ್ನೆ ಮೊನ್ನೆ ಅದು ತೀರಿತು. ಸೊಸೆ ಮನೆಗೆ ಬಂದಳು. ಆಗ 'ನನಗೆ ತುಂಬ ಆನಂದ ; ಮನೆಗೊಂದು ನಮ್ಮದಾದ ಹೆಣ್ಣು ದಿಕ್ಕು ಬಂತಲ್ಲ,

ಎಂದು. ಗಂಡ ಹೆಂಡತಿ ಇಬ್ಬರೂ ಬಹಳ ಪ್ರೀತಿಯಿಂದಿದ್ದರು. ನನ್ನ ಸೊಸೆ ಮನೆಯ ಕೆಲಸಗಳನ್ನೆಲ್ಲ ಮಾಡಿಕೊಂಡು, ಹೊಲದ ಕೆಲಸಗಳನ್ನೂ ನಮ್ಮೊಂದಿಗೆ ಮಾಡುತಿದ್ದಳು. ಬಲು ಒಳ್ಳೆಯವಳು. ನನ್ನನ್ನು ಕಂಡರೆ ಬಹಳ ಗೌರವ, ಮರ್ಯಾದೆ. ನಾನೂ, ಆಕೆ ಮನೆ ಬೆಳಸುವ ಲಕ್ಷ್ಮಿ, ಎಂದುಕೊಂಡಿದ್ದೆ. ಆದರೆ ಗಾಳಿಗೋಪುರ ಕುಸಿದು ಬಿತ್ತು. ನನ್ನ ಸೊಸೆಗೆ ಏಳು ತಿಂಗಳಾಗಿತ್ತು. ಆಗ ತುಂಬ ಖಾಯಿಲೆಯಾಯಿತು. ಒಂದು ದಿನ ಇದ್ದಕ್ಕಿದ್ದಂತೆಯೇ ಕಣ್ಣು ಮುಚ್ಚಿದಳು. ನನ್ನ ಮಗ ಬಲು ಗೋಳಾಡಿದ. ಆಕೆ ಗರ್ಭಿಣಿಯಾಗಿದ್ದುದರಿಂದ ಖಾಯಿಲೆ ಅವಳನ್ನು ಪಾರುಮಾಡಲಿಲ್ಲ. ಇಲ್ಲದಿದ್ದರೆ ಏನೂ ಭಯವಿರುತಿರಲಿಲ್ಲ, ಎಂದು ಶಾನುಭೋಗರು ಆಮೇಲೆ ಹೇಳಿದರು. ವಿಧಿ ನನ್ನನ್ನು ಅಷ್ಟಕ್ಕೇ ಬಿಡಲಿಲ್ಲ. ಮಗನಿಗೆ ಮತ್ತೊಂದು ಮದುವೆ ಮಾಡಬೇಕೆಂದು ಬಹಳ ಪ್ರಯತ್ನಪಟ್ಟೆ. ಕಡೆಗೆ ಸಾವಿರ ರೂಪಾಯಿ ತೆರ ಮಾತಾಡಿ ಹೆಣ್ಣು ಗೊತ್ತುಮಾಡಿದೆ. ಆದರೆ ಒಂದು ದಿನ ಬೆಳಗ್ಗೆ ಎದ್ದು ಎಂದಿನಂತೆ ನನ್ನ ಮಗನನ್ನೆಬ್ಬಿಸಲು ಹೋದಾಗ ನನ್ನ ಎದೆ ಬೆಂದು ಹೋಯಿತು. ನಿದ್ದೆ ಮಾಡುತಿರುವಂತೆಯೇ ಮಲಗಿದ್ದ. ಬಾಯಿಯಲ್ಲಿ ಸ್ವಲ್ಪ ಬುರುಗು ಬಂದಿತ್ತು. ಮೂಗಿನಲ್ಲಿ ರಕ್ತ ಸುರಿದಿತ್ತು. ಉಸಿರು ನೋಡಿದೆ. ನನಗೇನೂ ತಿಳಿಯಲಿಲ್ಲ. ಮೈಕೈ ಮುಟ್ಟಿನೋಡಿದೆ, ಕಾಲು ಮುಟ್ಟಿನೋಡಿದೆ, ಎದೆ ಮುಟ್ಟಿನೋಡಿದೆ; ದುಃಖ ಬಂದು ಬಿಟ್ಟಿತು. ಪಕ್ಕದ ಮನೆಯ ನಂಜಣ್ಣನನ್ನು ಕರೆದೆ. ಆತ ಬಂದು ನೋಡಿದ. 'ಎಲ್ಲ ಮುಗಿದುಹೋಗಿಬಿಟ್ಟಿದೆಯಪ್ಪ' ಎಂದುಬಿಟ್ಟ. ನನ್ನ ಎದೆಯೊಡೆಯಿತು. ಇನ್ನು ಮೇಲೆ ಈ ಜೀವ ಜಗತ್ತಿನೊಳಗಿರಬಾರದಪ್ಪ, ಎನ್ನಿಸಿತು. ಒಂದು ದಿನ ರಾಯರ ಹತ್ತಿರ ಎಲ್ಲ ಹೇಳಿಕೊಂಡೆ. ರಾಯರು ಆಗ ಇಷ್ಟು ಕೆಟ್ಟಿರಲಿಲ್ಲ. ಈಗ, ಈ ಎರಡನೆಯ ಅಮ್ಮಾವರು ಮನೆಗೆ ಬಂದ ಮೇಲೆ ಅವರ ಮನಸ್ಸೇ ಬದಲಾಯಿಸಿತು. ಮುಂಚೆ ನನಗೆಷ್ಟು ವೇದಾಂತ ಹೇಳುತಿದ್ದರು. ನಾನು ಎರಡು ಸಾರಿ, ಸಾಯಲು ನಿಶ್ಚಯಿಸಿದ್ದೆ. ಒಂದು ಬಾರಿ ಬಹಳ ದೂರ ಒಬ್ಬನೇ ಹೋಗಿ ರಾಯರ ಮಾವಿನ ತೋಪು ಸೇರಿದೆ. ಅಲ್ಲಿ ನೇಣು ಹಾಕಿಕೊಂಡುಬಿಡೋಣ ಎನ್ನಿಸಿತು. ಮರಕ್ಕೆ ರುಮಾಲನ್ನು ಸಹ ಕಟ್ಟಿದ್ದೆ. ಆದರೆ ಅದೇನೊ, ದೇವರು

ಒಳ್ಳೆಯ ಬುದ್ಧಿ ಕೊಟ್ಟ. ಜೀವ ಕಳೆದುಕೊಳ್ಳಲಿಲ್ಲ. ಆತ್ಮಹತ್ಯೆ ಬಹಳ ಕೆಟ್ಟದಂತೆ. ಏಕೆಂದರೆ ನಾವು ಇಷ್ಟಪಟ್ಟು ಈ ದೇಹ ಪಡೆಯಲಿಲ್ಲ. ಈ ದೇಹವನ್ನು ಹಾಳು ಮಾಡಲು ದೇವರಿಗೇ ಅಧಿಕಾರ. ಮನುಷ್ಯ ಆ ಕೆಲಸ ಮಾಡಿದರೆ ದೇವರಿಗೆ ಅಪರಾಧ ಮಾಡಿದ ಹಾಗಂತೆ. ಇವೆಲ್ಲ ನನಗೆ ತಿಳಿಯಿತು. ಏನು ಮಾಡುವುದು, ನನ್ನ ದುರದೃಷ್ಟ. ಆದುದರಿಂದ ಎಲ್ಲರನ್ನೂ ಕಳೆದುಕೊಂಡೆ, ಎಂದುಕೊಂಡು ಸುಮ್ಮನಿರುತಿದ್ದೆ. ಆದರೆ ರಾತ್ರಿಯ ಹೊತ್ತು ಮನಸ್ಸು ತಡೆಯುತಿರಲಿಲ್ಲ. ನನ್ನ ಹೆಂಡತಿ ಕಣ್ಣುಮುಂದೆ ನಿಲ್ಲುತಿದ್ದಳು; ಹುಚ್ಚುತಾಯಿ ಎಲ್ಲಿಯೋ ಅನ್ನ ನೀರಿಲ್ಲದೆ ನನ್ನನ್ನೇ ಕರೆಯುತಿರುವಂತೆ ಭಾಸವಾಗುತಿತ್ತು. ಮಗ ಬಂದುಬಿಡುತಿದ್ದ; ಸೊಸೆ ಕಾಣುತಿದ್ದಳು. ನಾನೊಬ್ಬನೇ ಅವರೆಲ್ಲರ ನಡುವೆ ದೇಹ ಇಟ್ಟುಕೊಂಡಿರುವವನು. ತುಂಬ ಭಯವಾಗುತಿತ್ತು; ನಾಚಿಕೆಯಾಗುತಿತ್ತು. ಸಾಯೋಣ, ಎನಿಸಿಬಿಡುತಿತ್ತು. ಆದುದರಿಂದ ಹಿಂದೆ ಹೇಳಿದ ವೇದಾಂತ ತಿಳಿದ ಮೇಲೆ ಮತ್ತೊಮ್ಮೆ ಜೀವ ಕಳೆದುಕೊಳ್ಳಲು ಹೊರಟಿದ್ದೆ. ಆದರೆ ಮತ್ತೆ ಆ ವೇದಾಂತ ಜ್ಞಾಪಕಕ್ಕೆ ಬಂದಿತು. ಆದುದರಿಂದ ಇನ್ನೂ ಜೀವದಿಂದಿದೇನೆ."

ಗಾಡಿಯೊಳಗಿರುವವರಿಗೆ ತಿಳಿಯದಂತೆಯೆ ಗಾಡಿ ಸಂತೆಗಾಡಿಗಳ ಹಿಂದೆ ಇಪ್ಪತ್ತು ಇಪ್ಪತ್ತೈದು ಮೈಲಿ ಸಾಗಿಬಿಟ್ಟಿತ್ತು. ಮೂರು ತಿಂಗಳ ಮಗು ನಿದ್ರಿಸುತ್ತಿತ್ತು. ಮುಂಗಡಿಕೂಸು, ಶಾರದ ಒಂಬತ್ತು ಗಂಟೆಗೆ ಮಲಗಿ ಬಿಟ್ಟಿದ್ದರು. ಲಲಿತ ಕಣ್ಣು ಮುಚ್ಚಿ ತೂಕಡಿಸುತ್ತಿದ್ದಳು. ಹಳ್ಳಕ್ಕೆ ಹರಿದಾಗ ಗಾಡಿ ಅಲುಗಾಡಿದರೆ, ಬೆನ್ನಿಗೆ ನೋವಾಗಿ ಕಣ್ಣುಬಿಡುತ್ತಿದ್ದಳು; ಹನುಮಣ್ಣನ ಕತೆಯಲ್ಲಿ ಸ್ವಾರಸ್ಯ ಕಂಡರೆ ಆಸಕ್ತಿಯಿಂದ ಕೇಳುತ್ತಿದ್ದಳು. ಆದರೆ ನಿದ್ದೆ ಅವಳನ್ನು ಹೇಳದೆ ಕೇಳದೆ ಆವರಿಸಿಬಿಡುತ್ತಿತ್ತು. ಪಾಪ, ಹುಡುಗಿ ಹಾಗೆಯೇ ಕಣ್ಣು ಮುಚ್ಚಿ ಬಿಡುತ್ತಿದ್ದಳು.

ಕೃಷ್ಣಪಕ್ಷದ ದಿನ. ಎರಡು ಕಡೆಯೂ ಒಂದಕ್ಕೊಂದು ತಿಕ್ಕಿ ಬೆಳೆದ ಸಾಲುಮರ. ಕತ್ತಲು ಹೇಳತೀರದು. ಹನುಮಣ್ಣ ರೊಟ್ಟಿ ತಿಂದಾಗಲೆ ದೀಪ ಹಚ್ಚಿ ಕಟ್ಟಿಬಿಟ್ಟಿದ್ದ. ಗಾಡಿ ನಿಧಾನವಾಗಿ ಸಾಗುತ್ತಿತ್ತು. ಏಕೆಂದರೆ ಮುಂದೆ ಹದಿನೈದು ಇಪ್ಪತ್ತು ಗಾಡಿಗಳು ದೇವರಹಳ್ಳಿಯ ಸಂತೆ ಮಾಡಲು ಹೊರಟಿದ್ದುವು. ದೇವರಹಳ್ಳಿ ಇನ್ನೂ ಎರಡು ಮೈಲಿ ಇತ್ತು.

ಅನಂತರ ಸ್ವಲ್ಪ ವೇಗವಾಗಿ ಹೋಗಬಹುದು.

ಗಾಡಿಗಳ ಮಿಣಕು ಮಿಣಕು ಸಾಲುದೀಪ ದಾರಿಗೆ ಬೆಳಕು ನೀಡಿದ್ದುವು. ಚಕ್ರಗಳ 'ಲೊಟಲೊಟ' ಶಬ್ದ, ಕಾಲಿನ ಗೆಜ್ಜೆಯ 'ಝುಲ್‌ಝುಲ್' ಶಬ್ದ, ಎತ್ತಿನ ಕತ್ತಿನ ಘಂಟೆಗಳ 'ಘಣಘಣ' ಶಬ್ದ, ಗಾಲಿ ಉರುಳುವ 'ಸೊಯ್‌ಯ್' ಶ್ರುತಿಗೆ ಮೇಳ ಕೊಟ್ಟಿದ್ದುವು; ತಾಳ ಹಾಕುತ್ತಿದ್ದುವು. ಹನುಮಣ್ಣನ ಕತೆ, ಮುಂದೆ ಹೋಗುತ್ತಿದ್ದ ಗಾಡಿಗಳವರಿಗೆ ಕೇಳುತ್ತಿರಲಿಲ್ಲ. ಆದರೆ ಹನುಮಣ್ಣ ಕತೆ ನಿಲ್ಲಿಸಿದಾಗ ಮುಂದಿನ ಗಾಡಿಗಳವರ ಹಾಡು ಸ್ವಲ್ಪ ಸ್ವಲ್ಪ ಕೇಳುತ್ತಿತ್ತು. ಒಬ್ಬೊಬ್ಬ ಒಂದೊಂದು ಚರಣ ಹಾಡುತ್ತಿದ್ದ. ಒಂದೂ ಸ್ಪಷ್ಟವಾಗಿ ಕೇಳುತ್ತಿರಲಿಲ್ಲ. ಎಲ್ಲ ಅರ್ಥಂಬರ್ಥ.

ದೇವರಹಳ್ಳಿ ದಾಟಿದ ಮೇಲೆ ರಸ್ತೆಗೆಲ್ಲ ಇದೊಂದೇ ಗಾಡಿಯಾಯಿತು. ಗಂಟೆ ಐದು ಬಡಿಯಿತು. ಮೂಡಲಲ್ಲಿ ನಸುಕು ಮೂಡಿತ್ತು. ಬೀಸುತ್ತಿದ್ದ ತಂಗಾಳಿಯಲ್ಲಿ ಕಾಡು ಹೂಗಳ ವಾಸನೆ ತುಂಬಿತ್ತು ; ಯಾವ ಹೂವಿನದೊ? ಹೇಳುವಂತಿಲ್ಲ. ಎಲ್ಲ ಜಾತಿಯದೂ ಬೆರೆತುಬಿಟ್ಟಿದೆ. ಅಂತೂ ಸುವಾಸನೆ ಬಲು ಚೆನ್ನಾಗಿದೆ. ದೂರದಲ್ಲಿ ಅಲ್ಲೊಂದು ಇಲ್ಲೊಂದು ಹಕ್ಕಿ ಕೂಗುತ್ತಿದ್ದುವು. ಆರು ಗಂಟೆಗಾಗಲೇ ಬೆಳಕು ಹರಿಯತೊಡಗಿತು. ಲಲಿತ ಎದ್ದಳು.

" ಇನ್ನು ಆರು ಮೈಲಿ ಹೋಗಿ ಮಧುಕೆರೆಯ ಹತ್ತಿರ ಒಂದು ಗಂಟೆ ವಿಶ್ರಮಿಸಿಕೊಳ್ಳೋಣ. ಅಲ್ಲಿರುವ ಮಂಟಪ ಬಲು ಸೊಗಸಾಗಿದೆ ನಾನು ಅಕ್ಕಿ ಬೇಳೆ ಪಾತ್ರೆ ಎಲ್ಲ ತಂದಿದೇನೆ. ಹುಡುಗರಿಗೆ ಅನ್ನ ಮಾಡಿ ಹಾಕಿ, ಆಮೇಲೆ ಹೊರಡೋಣ " ಎಂದು ಹನುಮಣ್ಣ ಹೇಳಿದ.

ಸೀತಮ್ಮ " ಅನ್ನ ಏಕೆ ಹನುಮಣ್ಣ? ರೊಟ್ಟಿ ಒಂದೊಂದು ಬರುತದೆ. ಅದನ್ನು ತಿಂದು ನೀರು ಕುಡಿದರಾಯಿತು. ಆದರೆ, ಒಂದು ಗಂಟೆ ವಿಶ್ರಾಂತಿ ತೆಗೆದುಕೊಳ್ಳೋಣ. ನನಗೂ ತುಂಬ ನೋವಾಗಿದೆ. ಮಗುವನ್ನು ಮಲಗಿಸಿಕೊಂಡಿದ್ದ ಈ ಕಾಲು ಜುಮ್ಮೆನ್ನುತಿದೆ " ಎಂದಳು.

ಹನುಮಣ್ಣ " ಇಲ್ಲ, ಅಡುಗೆ ಮಾಡಬೇಕು, ತಾಯಿ. ಮಕ್ಕಳು ನಿನ್ನೆ ಬೆಳಗ್ಗೆ ಊಟಮಾಡಿದ್ದು. ನಮಗೇ ಹಸಿವೆಯಾಗುತಿದೆ. ಇನ್ನು ಮಧ್ಯಾಹ್ನ ಎರಡು ಗಂಟೆಯುವರೆಗೂ ಉಪವಾಸ ಇರಬೇಕೆ?" ಎನ್ನುತ್ತಾ

ಎತ್ತಿನ ಬೆನ್ನು ಚಪ್ಪರಿಸಿದ. ಗಾಡಿ ವೇಗವಾಗಿ ಓಡಿತು. ಬೇಗ ಮಧುಕೆರೆ ಬಂದು ಬಿಟ್ಟಿತು.

ಹನುಮಣ್ಣ ಹತ್ತಿರದಲ್ಲಿಯೆ ಇದ್ದ ಕಟ್ಟಿಗೆ ಚೂರುಗಳನ್ನಾರಿಸಿ ತಂದು ಕಸ ಗುಡಿಸಿ ಮೂರು ಕಲ್ಲಿನ ಒಲೆ ಸಿದ್ಧಪಡಿಸಿದ. ಅಡುಗೆ ಮಾಡಲು ಮಂಟಪ ಬಹಳ ಚೆನ್ನಾಗಿತ್ತು. ನಿರ್ಜನ ಪ್ರದೇಶವಾದರೂ ತಂಪಾದ ಮನಸಳೆಯುವ ವಾತಾವರಣ. ಸೀತಮ್ಮ ಸಂತೋಷದಿಂದ ನೀರುತಂದು ಅಡುಗೆಗಿಟ್ಟಳು. ಹತ್ತಿರದಲ್ಲಿಯೆ ಇದ್ದ ಮುಳ್ಳುಬದನೆಕಾಯಿ, ಹೊನಗೊನೆ ಸೊಪ್ಪು ತರಕಾರಿಯಾಯಿತು. ಒಂದು ಹುಳಿ ಅನ್ನ ಬಲುಬೇಗ ಆಯಿತು. ಅಡುಗೆಯಾಗುವುದರೊಳಗೆ ಹನುಮಣ್ಣ ಎಲ್ಲಿಲ್ಲೊ ಸುತ್ತಿ, ಮುತ್ತುಗದೆಲೆ, ಕಡ್ಡಿ ತಂದು ಆರು ಎಲೆ ಹಚ್ಚಿಬಿಟ್ಟಿದ್ದ. ಮಜ್ಜಿಗೆ ಇಲ್ಲದಿದ್ದರೂ ಎಲ್ಲರೂ ಹೊಟ್ಟೆ ತುಂಬ ಆನಂದದಿಂದ ಊಟ ಮಾಡಿದರು. ಹನುಮಣ್ಣನ ಸಂಭ್ರಮ, ಆದರ ಹಾಗೆ ಮಾಡಿತು.

ಗಾಡಿ ಕಟ್ಟಿಕೊಂಡು ಮುಂದೆ ಹೊರಟರು. ಇನ್ನು ಹದಿನೈದು ಮೈಲಿ ಸಾಗಬೇಕು. ರಾತ್ರಿ ಹನುಮಣ್ಣ ಹೇಳಿದ ಕತೆ ಸೀತಮ್ಮನ ಕಣ್ಣಿಗೆ ಕಟ್ಟಿದಂತಿತ್ತು. ತನ್ನ ಜೀವನವನ್ನು ಅದರೊಂದಿಗೆ ಹೋಲಿಸಿ ಹೋಲಿಸಿ ಮನದಲ್ಲಿ ಎಣಿಕೆ ಹಾಕುತ್ತಿದ್ದಳು. ಹನುಮಣ್ಣನ ಸೊಸೆ ಎಂಥ ಪುಣ್ಯಾತ್ಮ ಗಿತ್ತಿ ! ಇಂಥ ಮಾವನ ಮನೆಯ ಅಂಥ ಗಂಡನೊಂದಿಗೆ, ಅತ್ತೆಯೊಂದಿಗೆ ಬಾಳುವ ಸುಯೋಗ ಪಡೆದಿರಲಿಲ್ಲ. ಆದರೆ ತಾನು ಜೀವದಿಂದಿದ್ದು ಎಂಥ ಪಾಡು ಪಡುತ್ತಿದ್ದಾಳೆ. ದೇವರು ಸೃಷ್ಟಿಯಲ್ಲಿ ಎಡವಿದ್ದಾನೆ. ತನಗೆ ಅವಳ ವಯಸ್ಸು ಕೊಡಬೇಕಾಗಿತ್ತು ; ಅವಳಿಗೆ ತನ್ನ ವಯಸ್ಸು ಕೊಡಬೇಕಾ ಗಿತ್ತು ; ಈ ಮಾಂಗಲ್ಯ ಕೊಡಬೇಕಾಗಿತ್ತು. ಆಗ ಹನುಮಣ್ಣನ ಅಚ್ಚು ಮೆಚ್ಚಿನ ಸಂಸಾರ ಬೆಳಗುತ್ತಿತ್ತು. ಈ ಕಷ್ಟ, ತಪ್ಪು ಮಾಡದ ಈತನಿ ಗೊದಗುತ್ತಿರಲಿಲ್ಲ, ಎಂದುಕೊಂಡಳು.

ಶಾರದ “ಅಮ್ಮಾ, ಇನ್ನೂ ಎಷ್ಟು ದೂರ ಹೋಗಬೇಕಮ್ಮಾ ? ನನಗೆ ಬೆಳಗ್ಗೆ ಆದ ಕೂಡಲೆ ಹಸಿವೆಯಾಗಿಬಿಟ್ಟಿತ್ತು. ಊಟ ಮಾಡಿದ್ದು ಬಹಳ ಒಳ್ಳೆಯದಾಯಿತು” ಎಂದಳು.

ಹನುಮಣ್ಣ ಇದನ್ನು ಕೇಳಿದ. “ನೋಡಿದಿರಾ ತಾಯಿ. ನಾವು

ಅಡುಗೆ ಮಾಡಿಕೊಳ್ಳದಿದ್ದರೆ ಈ ಹುಡುಗರ ಗತಿ ಏನಾಗಿಬಿಡುತಿತ್ತು. ಮಧ್ಯಾಹ್ನ ಎರಡು ಗಂಟೆಯುವರೆಗೂ ಉಪವಾಸದಿಂದಿರಬೇಕಾಗಿತ್ತು. ಆಮೇಲೆ ಅಲ್ಲಿ ಸ್ನಾನಮಾಡಿ ಊಟ ಮಾಡಬೇಕು" ಎಂದ.

"ಅಯ್ಯೋ ಹನುಮಣ್ಣ, ಅಲ್ಲಿನ ಸ್ಥಿತಿ ನಿನಗೇನು ತಿಳಿದಿದೆ! ನಾವು ಹೋದ ಕೂಡಲೆ ಅನ್ನ ಮಾಡಿ ಕಾಯುತಿರುತಾರೆ ಎಂದು ತಿಳಿದಿದೀಯ? ನಾವು ಬರುವುದು ಅವರಿಗೆ ಗೊತ್ತಿಲ್ಲ. ಅವರಿಗೆ ನಮ್ಮ ತಂದೆ ಕಾಗದವನ್ನೇ ಹಾಕಿಲ್ಲ. ತಿಳಿದಿದ್ದರೂ ನಮಗಾಗಿ ಅವರು ಅಷ್ಟು ಅನುಕೂಲಮಾಡಿಕೊಂಡು ಕಾದಿರುತಾರೆಂದುಕೊಂಡೆಯೇನು? ಏನೇನು ಕಷ್ಟಪಡಬೇಕೊ. ಅತ್ತೆ ಮನೆಯ ಸುಖದುಃಖವನ್ನು ಎಲ್ಲರೆದುರಿಗೂ ಹೇಳಿಕೊಳ್ಳುವವಳು ಒಳ್ಳೆಯ ಸೊಸೆಯಲ್ಲ, ಎನ್ನುತಾರೆ ಹಿರಿಯರು. ಆದುದರಿಂದ ನಾನು ಸುಮ್ಮನಿದೇನೆ"

"ಆದರೆ ನನಗೆ ಗೊತ್ತು ತಾಯಿ. ನಿಮ್ಮ ಅತ್ತೆಮನೆಯವರು ತುಂಬ ಕಷ್ಟಪಡಿಸುತಾರೆ. ಸೂರಪ್ಪನವರು ದೊಡ್ಡ ಜಗಳವಂತರು. ನಿಮ್ಮತ್ತೆ ಯವರು ಚಂಡಿಯ ಹಾಗಿದಾರೆ, ಎಂತ ಚಿನ್ನದ ಕಟ್ಟೆಯೋ ಹೇಳುತಿದೆ. ಆದರೆ ನಾನು ನಿಮ್ಮ ಬಾಯಿಂದ ಕೇಳಬೇಕು. ಎಷ್ಟೋ ಸಲ ಅವರಿಗೆ ಶಪಿಸಿದೇನೆ. ನೀವು ಯಾಕೆ ತಾಯಿ ಸುಮ್ಮನಿರುತೀರಿ? ಊರಿನ ನಾಲ್ಕು ಜನ ಬುದ್ಧಿವಂತರಿಗೆ ಹೇಳಿಬಿಡಬಾರದೆ? ತಪ್ಪಿಲ್ಲದೆ ದಂಡಿಸಿದರೆ ಬೀದಿಗೆ ಬಂದುಬಿಡಬೇಕು. ನಾಲ್ಕು ಜನರ ಪಂಚಾಯಿತಿ ಮಾಡಿಸಿ, ಊರಿನವ ರೆಲ್ಲಾ ಅವರಿಂದ ದಂಡ ವಸೂಲು ಮಾಡಬೇಕು. ನಿಮ್ಮ ಜಾತಿ ಎಂಥ ಜಾತಿಯೋ? ಮಠ ಗಿಠ, ಸ್ವಾಮಿಗಳು ಇವರೆಲ್ಲ ಏತಕ್ಕಿದಾರೆ ತಾಯಿ? ಸುಮ್ಮನೆ ತಲೆ ಹೊಡೆದು ದುಡ್ಡು ಸಂಪಾದಿಸುತಾರೆ. ಜಾತಿಯನ್ನು ಉದ್ಧಾರ ಮಾಡುವುದಕ್ಕಲ್ಲವೆ? ಸಂಸಾರದಲ್ಲಿರುವ ಅನಾಚಾರ ತಪ್ಪಿಸು ವುದಕ್ಕಲ್ಲವೆ? ಇದನ್ನೆಲ್ಲ ನೋಡಿದರೆ ನಮ್ಮ ಜಾತಿಯೇ ಮೇಲು.

"ನನ್ನ ದೂರದ ಸೋದರಮಾವ ಒಬ್ಬ ಇದ್ದ. ತುಂಬ ಕುಡುಕ, ಬೆಳಗ್ಗೆಯಿಂದ ಸಂಜೆಯವರೆಗೆ ತಾನು ದುಡಿಯುತಿದ್ದ; ತನ್ನ ಹೆಂಡತಿಯೂ ದುಡಿಯುತಿದ್ದಳು. ಸಂಜೆಯಾದ ಕೂಡಲೆ ಅವನು ಹೆಂಡದ ಅಂಗಡಿಗೆ ಹಾಜರು. ಒಂದೊಂದು ರಾತ್ರಿ ಮನೆಗೆ ಬರುತಲೇ ಇರಲಿಲ್ಲ. ಅಲ್ಲಿಯೇ ಕುಡಿದು, ಕುಡಿದು ಮಲಗಿಬಿಡುತಿದ್ದ. ಸ್ವಲ್ಪವೂ ಜ್ಞಾನವಿರುತಿರಲಿಲ್ಲ.

ಅವರಿದ್ದ ಊರಿನಲ್ಲಿ ಅವರ ನಂಟರಾರೂ ಇರಲಿಲ್ಲ. ಆದರೆ ಆತನ ಹೆಂಡತಿ ಗಟ್ಟಿಗಿತ್ತಿ. ಹೆಂಡಕುಡುಕರ ಸಹವಾಸ ಬಲು ಕೆಟ್ಟುದೆಂದು ಆಕೆಗೆ ಚೆನ್ನಾಗಿ ಗೊತ್ತಿತ್ತು. ಆದರೆ ಆತನಿಗೆ ತಾನು ದುಡಿದದ್ದು ಸಾಲದೆ ಹೆಂಡತಿಯನ್ನು ಹೊಡೆದು ಬಡಿದು ಅವಳ ಕಾಸನ್ನೂ ಕಿತ್ತುಕೊಂಡು ಹೋಗಿಬಿಡುತಿದ್ದ. ಅವಳಿಗೆ ಒಮ್ಮೆ ಇದು ತನ್ನ ಗಂಡನ ತಪ್ಪಲ್ಲ ; ಹೆಂಡ ಕುಡಿಸುವವರ ತಪ್ಪು, ಕುಡಿದು ಕುಣಿಯುವವರನ್ನು ನೋಡಿ ತೆಪ್ಪಗಿರುವ ಜನರ ತಪ್ಪು. ಜಾತಿಯ ತಪ್ಪು ಎನ್ನಿಸಿತು.

" ಒಂದು ದಿನ ಸಂಜೆ ಗಂಡ ಬೇಗ ಬಂದ. ಹೆಂಡತಿಯನ್ನು ಹಿಡಿದುಕೊಂಡು ಚೆನ್ನಾಗಿ ಹೊಡೆದ. ಬಳೆಗಳೆಲ್ಲಾ ಒಡೆದು ಕೈಗಳಲ್ಲಿ ರಕ್ತ ಹರಿಯಿತು. ಜ್ಞಾನತಪ್ಪಿ ಬಿದ್ದುಬಿಟ್ಟಳು. ಆಕೆಯ ಉಡಿಯಲ್ಲಿದ್ದ ಒಂದೂವರೆ ರೂಪಾಯಿಯನ್ನು ತೆಗೆದುಕೊಂಡು ಹೊರಟುಹೋದ. ಬಹಳ ಹೊತ್ತಿನಮೇಲೆ ಅವಳಿಗೆ ಎಚ್ಚರವಾಯಿತು, ಎದ್ದುನೋಡುತಾಳೆ, ಹಟ್ಟಿಯ ಬಾಗಿಲು ತೆರೆದಿದೆ. ಒಂದೂವರೆ ರೂಪಾಯಿ ಇಲ್ಲ. ಮೈಕೈಯೆಲ್ಲ ರಕ್ತ. ಬಹಳ ಸಿಟ್ಟು ಬಂತು. ಕಾಳಿಯಂತೆ ಬೀದಿಗೆ ಬಂದುಬಿಟ್ಟಳು. ಊರ ಗೌಡನನ್ನು, ಗುಡಿಯಲ್ಲಿದ್ದ ಪೂಜಾರರನ್ನು, ಶಾನುಭೋಗರನ್ನು, ಬುದ್ಧಿವಂತರನ್ನು ಎಲ್ಲರನ್ನೂ ಬಲವಂತದಿಂದ ಹೊರಡಿಸಿಕೊಂಡು ಹೆಂಡದಂಗಡಿಯ ಕಡೆ ನಡೆದಳು. ಗಂಡ ಯಾರೊಡನೆಯೋ ಗುದ್ದಾಡಿ ಮೈಯೆಲ್ಲ ರಕ್ತ ಮಾಡಿಕೊಂಡು, ಸ್ವಲ್ಪ ಹೆಂಡವಿರುವ ಒಡಕು ಸೀಸೆಯೊಂದಿಗೆ ಅಂಗಡಿಯ ಈಚೆ–ಚರಂಡಿಯಲ್ಲಿ ಜ್ಞಾನವಿಲ್ಲದೆ ಬಿದ್ದಿದ್ದ. ಹೊಟ್ಟೆ ಉಬ್ಬರಿಸಿತ್ತು. ಹೆಂಡ ಹಂಚುವವನು, ಇಂಥ ಹೊಟ್ಟೆ ಉಬ್ಬರಿಸಿದವರೆಷ್ಟೋ ಮಂದಿಗೆ ಸಂಜೆಯಿಂದ ಎಡೆಬಿಡದೆ ಸುರಿಯುತ್ತಿದ್ದ. ಈ ನೋಟ ನೋಡಿ ಆಕೆಯೊಡನಿದ್ದ ಎಲ್ಲರಿಗೂ ಬಲು ದುಃಖವಾಯಿತು ; ತಾವು ಇದುವರೆಗೂ ಸುಮ್ಮನಿದ್ದುದನ್ನು ನೆನೆಸಿಕೊಂಡಾಗ ನಾಚಿಕೆಯಾಯಿತು. ಆಕೆ ಗಂಡನ ಹತ್ತಿರ ನಿಂತು ' ನಮ್ಮ ಜಾತಿ, ಬುದ್ಧಿವಂತರು, ಹಿರಿಯರು ಎಲ್ಲ ಇಂಥವರ ಆಟ ಅನಾಚಾರ ನೋಡಿ ಆನಂದಪಡುತಿದಾರೆ. ಇವರ ಮುಖಕ್ಕೆ ಸಗಣಿ ತಿಕ್ಕುವವರಿಲ್ಲ. ಆದುದರಿಂದ ಇದು ಸುಖವಾಗಿ ಸರಾಗವಾಗಿ ಸಾಗುತಿದೆ. ದೊಡ್ಡವರೆನಿಸಿಕೊಂಡವರಿಗೆ, ಬುದ್ಧಿವಂತರಿಗೆ, ಜಾತಿಯ ಗುರುಗಳಿಗೆ

ಕಣ್ಣಿದೆಯೆ ? ಅವರು ಹಾಗೆ ಕರಸಿಕೊಳ್ಳಲು ಯೋಗ್ಯರೆಂದು ಯಾರು ಹೇಳುವವರು ? ಇಲ್ಲಿ ನೋಡಿ, ಒಂದೂವರೆ ರೂಪಾಯಿಯನ್ನು ಕಿತ್ತು ಕೊಂಡು ಹೆಂಡವನ್ನು ಸುಮ್ಮನೆ ಸುರಿದು ಬಿಟ್ಟಿದಾನೆ, ಈ ಅಂಗಡಿಯವ ಮನುಷ್ಯನೂ ಹೆಂಡದ ಪಿಪಾಯಿ ಎಂದು ಆತ ತಿಳಿದುಬಿಟ್ಟಿದಾನೆ. ತಾನು ಹೆಂಡದ ವ್ಯಾಪಾರ ಮಾಡುತಿರುವುದು ತನ್ನ ಸಂಸಾರ ಸಾಗಿಸುವುದಕ್ಕೆ; ಅದನ್ನು ಕಾಪಾಡುವುದಕ್ಕೆ; ಉದ್ಧರಿಸುವುದಕ್ಕೆ: ಅದರಂತೆಯೇ ಕುಡಿ ಯುವವನಿಗೂ ಒಂದು ಸಂಸಾರ ಇದೆ, ಅವನು ದುಡಿಯುವುದೆಲ್ಲ ಹೆಂಡ ಕುಡಿಯುವುದಕ್ಕಲ್ಲ. ಆದರೆ ಈತ ಹಗಲುದರೋಡೆ ಮಾಡಿ ಜೇಬಿನ ಹಣವನ್ನೆಲ್ಲ ಕಿತ್ತುಕೊಂಡು ಹೆಂಡ ಕುಡಿಸಿಬಿಟ್ಟಿದಾನೆ. ಮನೆಯವರೆಲ್ಲ ಹೊಟ್ಟೆಯ ಮೇಲೆ ಒದ್ದೆಬಟ್ಟೆ ಹಾಕಿಕೊಳ್ಳಬೇಕೇನು ?' ಎಂದು ದುಃಖ ದಿಂದ ಏನೇನೋ ಹೇಳಿಬಿಟ್ಟಳು. ಅವಳ ಆ ರೂಪು ನೋಡಿ ಅನೇಕರಿಗೆ ತುಂಬ ಕನಿಕರವಾಯಿತು. ಊರಿನ ಗೌಡರು, ಬುದ್ಧಿವಂತರು ಸೇರಿ ಕುಡುಕ ರಿಗೆ ಜಾತಿಯಿಂದ ಬಹಿಷ್ಕಾರ ಹಾಕಿಬಿಟ್ಟರು. ಊರಿನಲ್ಲಿ ಅವರಿಗೆ ತೊಟ್ಟು ನೀರು ಸಿಕ್ಕುವುದು ಕಷ್ಟವಾಯಿತು. ಆಮೇಲೆ ಆತ ದಾರಿಗೆ ಬಂದ; ಹೆಂಡದ ಊರು ಹುಡುಕಿಕೊಂಡು ಹೋಗಲಿಲ್ಲ. ಜಾತಿಯ ಮುಖ್ಯಸ್ಥರು, ಊರಿನ ಬುದ್ಧಿವಂತರು ಇಂಥ ಅನಾಚಾರಗಳನ್ನು ಸರಿಪಡಿಸಬೇಕು. ಅದು ಅವರಿಗೆ ತಿಳಿಯಬೇಕಾದರೆ ನೀವು ಹೀಗಿರಬಾರದು, ತಾಯಿ. ಗುರುಗಳು ಎನ್ನಿಸಿಕೊಂಡವರು, ಬುದ್ಧಿವಂತರು ಎಲ್ಲ ಬೃಹಸ್ಪತಿಗಳಲ್ಲ. ಅವರ ಕಿವಿ, ಈ ಕೂಗಿನ ಕಡೆ ತಾನಾಗಿಯೇ ಒಡ್ಡಿ ನಿಲ್ಲುವುದಿಲ್ಲ. ನೀವು ಸುಮ್ಮನಿರ ಬೇಡಿ ತಾಯಿ. ನಾಲ್ಕು ಜನರ ಮುಂದೆ ಎಲ್ಲ ಬಿಚ್ಚಿಬಿಡಿ" ಎನ್ನುತ್ತ ಛಾಟಿಯಿಂದ ಎತ್ತಿ ಬೆನ್ನಿನ ಮೇಲೆ ಫಕೀರನೆ ಹೊಡೆದ ಗಾಡಿ ವೇಗವಾಗಿ ಓಡಿತು. ಊರು ಸೇರಲು ಉಳಿದಿದ್ದ ಒಂದೇಒಂದು ಮೈಲಿಕಲ್ಲೂ ದಾಟಿ ಹೋಯಿತು.

೭

ಕೃಷ್ಣಮೂರ್ತಿ ಊರಿನಲ್ಲಿರಲಿಲ್ಲ. ಚೆಲುವಿನಕೊಪ್ಪದ ಅಡಕೆ ಕೊಯ್ಲಿಗೆ ಹೋಗಿ ಎಂಟು ದಿನಗಳಾಗಿದ್ದುವು. ಆ ತೋಟದಿಂದ ಸೂರಪ್ಪ ನಿಗೆ ಪ್ರತಿ ವರ್ಷವೂ ಚೆನ್ನಾಗಿ ಫಸಲು ಬರುತ್ತಿತ್ತು. ಅಡಕೆಯ ಬೆಲೆಯೂ

ಈ ಸಲ ಏರಿದೆ. ಸೂರಪ್ಪನ ಹೆಂಡತಿ ನಂಜಮ್ಮ ರಾಜುವನ್ನು ತನ್ನ ದೂರದ ಸಂಬಂಧಿಗಳೊಬ್ಬರ ಮಗನ ಉಪನಯನದ ಸಲುವಾಗಿ ನಿಂಗನ ಹಳ್ಳಿಗೆ ಕರೆದುಕೊಂಡು ಹೋಗಿದ್ದಳು. ಸೂರಪ್ಪ ಅಕ್ಕಿ ಆರಿಸುತ್ತ ಬೀದಿಯ ಬಾಗಿಲಲ್ಲಿ ಕುಳಿತಿದ್ದ. ಅವನೊಬ್ಬನೇ ಮನೆಯಲ್ಲಿದ್ದುದು. ಎತ್ತರವಾದ ಆಳು; ಬಡಕಲು ಮೈ. ಯಾರನ್ನು ಕಂಡರೂ ಉರಿದುರಿದು ಬೀಳುತ್ತಾನೆ. ಆ ಉರಿಯೇ ಅವನನ್ನೊಣಗಿಸಿಬಿಟ್ಟಿದೆ. ದಿನದಿನಕ್ಕೂ ಆ ಗುಣ ಹೆಚ್ಚು ತ್ತಿದೆಯೇ ಹೊರತು, ಇಳಿಯುವಂತಿಲ್ಲ. ವಯಸ್ಸಾಗುತ್ತ ಆಗುತ್ತ ಮನು ಷ್ಯನ ಸಿಟ್ಟು ಹೆಚ್ಚಾಗುವುದಂತೆ. ಸಣ್ಣ ಸಣ್ಣ ವಿಷಯಗಳಲ್ಲೆಲ್ಲ ತಲೆ ಹಾಕಿ, ತಪ್ಪು ಹುಡುಕಿ ಕೆದಕುವ ಸ್ವಭಾವ ಬರುವುದಂತೆ. ಆದರೆ ಕೆಲವರು, ವಯಸ್ಸಾದ ಹಾಗೆಲ್ಲ ಮನುಷ್ಯ ಹೆಚ್ಚು ಸಂಸ್ಕೃತನಾಗುತ್ತಾನೆ. ಅವನಿಗೆ ಜೀವನದ ಅನುಭವ ಸಾಕಷ್ಟು ಇರುತ್ತದೆ. ಸುಖದುಃಖ ಎಲ್ಲ ತಿಳಿದಿರು ತ್ತದೆ. ಎಲ್ಲ ತನ್ನ ಹೃದಯಕ್ಕೆ ಸಂಬಂಧಿಸಿಧ ನಿದರ್ಶನಗಳೇ ಅನುಭವ ಕೊಟ್ಟಿರುತ್ತವೆ. ಆದುದರಿಂದ ಹಿರಿಯರು ವಾನಪ್ರಸ್ತವನ್ನು ಮುದಿತನಕ್ಕೆ ಮೀಸಲಾಗಿಟ್ಟಿದ್ದಾರೆ. ಆಗ ಜೀವಕ್ಕೆ ಸಮಾಧಾನವಿರುವುದರಿಂದ ವೇದ ಪುರಾಣಗಳನ್ನೋದಿ ಅರಗಿಸಿಕೊಳ್ಳಬಹುದು, ಎಂದು ಹೇಳುತ್ತಾರೆ. ಆದರೆ ಈ ಸೂರಪ್ಪನನ್ನು ನೋಡುವವರಿಗೆ ಯಾವುದು ಸರಿಯೋ ತಿಳಿಯದು.

ಸೂರಪ್ಪ ಅಕ್ಕಿ ಆರಿಸುವುದರಲ್ಲಿಯೇ ಮಗ್ನನಾಗಿದ್ದ. ಗಾಡಿ ಬಾಗಿ ಲಲ್ಲಿ ಬಂದು ನಿಂತುಬಿಟ್ಟಿತು. ಹನುಮಣ್ಣ ಎತ್ತಿಗೆ ಚಪ್ಪರಿಸಿದ ಶಬ್ದ ಸೂರ ಪ್ಪನನ್ನು ಎಚ್ಚರಿಸಿತು. ಆಗಲೇ ಇಲ್ಲದ ಸಿಟ್ಟು ಬಂದುಬಿಟ್ಟಿತು. ಹಾಗೆಯೇ ಕುಳಿತು ಸೊಟ್ಟಮೋರೆಯಲ್ಲಿ ಒಮ್ಮೆ ನೋಡಿದ. ಎದ್ದು ಅಕ್ಕಿಯ ಮೊರ ವನ್ನು ಒಳಗಿಟ್ಟು ಬರಲು ಹೋದ. ಲಲಿತ ಮಗುವಿನ ಬಟ್ಟೆ ಹಿಡಿದು ಕೊಂಡು ಕೆಳಗಿಳಿದಳು. ಸೀತಮ್ಮ ಮಗುವನ್ನು ಲಲಿತೆಯ ಕೈಯಲ್ಲಿ ಕೊಟ್ಟು ಇಳಿದಳು. ಇಬ್ಬರು ಮಕ್ಕಳೂ ಇಳಿದದ್ದಾಯಿತು. ಶಾರದ ರೈಲುತಂಬಿಗೆಯನ್ನು ಕಟ್ಟೆಯ ಮೇಲಿಟ್ಟು ಉಳಿದ ಸಾಮಾನುಗಳನ್ನಿಳಿಸಲು ಗಾಡಿಯ ಹತ್ತಿರಕ್ಕೆ ಬಂದಳು. ಹನುಮಣ್ಣ ನೊಗ ಬಿಚ್ಚುತ್ತಿದ್ದ.

ಸೂರಪ್ಪ ಸರಸರನೆ ಒಳಗಿಂದ ಬಂದ; "ಯಾಕೆ ಬಂದೆ ಸೀತ ಇಷ್ಟು ಬೇಗ? ಹಿರಿಯರ ಮಾತೆಂದರೆ ನಿನಗೆ ಇಷ್ಟು ಅಲಕ್ಷ್ಯವೊ?

ಇಷ್ಟೊಂದು ಮಕ್ಕಳ ತಾಯಿ ಆಗಿದೀಯು? ಇನ್ನೂ ಬುದ್ಧಿಯಿಲ್ಲವೆ? ನಾನು ಸಾವಿರಸಲ ಹೇಳಲಿಲ್ಲವೆ? ಕಾಗದ ಬರೆಯುವವರೆಗೂ ಬರಕೂಡ ದೆಂದು. ನನ್ನ ಮಾತೆಂದರೆ ನಿನಗೆ ಇಷ್ಟೊಂದು ಧೋರಣೆಯೊ! ಏನು, ನಾನು ಎಂದರೆ ನಿನಗೆ ಹುಲ್ಲಿಗಿಂತ ಕಡೆಯಾಯಿತೇನೊ. ನೀನು ನಮ್ಮ ಮನೆಗೆ ಯಾವ ವಿಷಗಳಿಗೆಯಲ್ಲಿ ಬಂದೆಯೊ. ಮನೆಯೆಲ್ಲ ಸಾರಿಸಿದಂತೆ ನಿರ್ನಾಮವಾಗುತಿದೆ. ........ನಾನೂ ಸಮಾಧಾನ ತೆಗೆದುಕೊಳ್ಳುತಲೇ ಇರುತೇನೆ ...ಆಗಲೆ ಹೇಳಿರಲಿಲ್ಲವೆ? ಆರು ತಿಂಗಳು ಕಳೆಯುವುದಕ್ಕೆ ಮುಂಚೆ ಬಂದರೆ ಮನೆಯ ಮೆಟ್ಟಲುಗಲ್ಲು ಹತ್ತಿಸುವುದಿಲ್ಲ, ಎಂತ ... ನನ್ನನ್ನು ಏನೆಂದು ತಿಳಿದಿದೀಯೆ ಹೆಂಗಸು ಇಷ್ಟೊಂದು ಅವಿಧೇಯತೆ ಯಿಂದ ನಡೆದುಕೊಳ್ಳೋಣ ಎಂದರೇನು? ಅಬ್ಬಬ್ಬ!....ಮನೆಯಲ್ಲಿ ಯಾರಿದಾರೆ ಎಂದು ತಿಳಿದಿದೀಯು? ಯಾರೂ ಊರಲ್ಲಿಲ್ಲ. ನಾನೊಬ್ಬನೇ ಇರುವುದು. ಇಲ್ಲಿ ನಿನ್ನ ಶುಶ್ರೂಷೆ ಯಾರು ಮಾಡಿಯಾರು! ನಡಿ.... ಆರು ತಿಂಗಳಾಗುವವರೆಗೆ ಬರಬೇಡ. ಹೊಸ್ತಿಲು ಹತ್ತೀಯ" ಎಂದ ಕೂಗಾಡಿದ.

ಗಾಡಿ ಬಿಚ್ಚುತ್ತಿದ್ದ ಹನುಮಣ್ಣ ಅದನ್ನು ಅಲ್ಲಿಗೇ ಬಿಟ್ಟ. ಆತನಿಗೆ ತುಂಬ ಸಿಟ್ಟು ಬಂದುಬಿಟ್ಟಿತು. "ಇದೇನು ರಾಯರೆ, ಹೀಗೆನ್ನುತೀರಿ! ಈಕೆ ಯಾರ ಮನೆಯವರು!........ನಿಮ್ಮ ಸೊಸೆ ಅಲ್ಲವೆ? ನಿಮ್ಮ ಮನೆ ಬೆಳೆಯುತಿರುವುದು ಯಾರಿಂದ? ನಿಮಗೇನು ಬುದ್ಧಿಯಿಲ್ಲವೆ. ನಮಗಾದರೆ—ತಿಳಿಯದ ಜನ--ಬುದ್ಧಿಯಿಲ್ಲ. ನೀವು ಬ್ರಾಹ್ಮ ಣರು. ವೇದಗೀದ ತಿಳಿದವರು. ರಾಮಾಯಣ ಮಹಾಭಾರತ ಎಲ್ಲ ಮುಗಿಸಿಬಿಟ್ಟಿದೀರಿ. ಮಗುವಿನೊಡನೆ ಬಂದ ಮೂರು ತಿಂಗಳ ಬಾಣಂತಿ ಯನ್ನು ನಡುಬೀದಿಯಲ್ಲಿ ನಿಲ್ಲಿಸಿ, ಹೀಗೆಲ್ಲ ಅನ್ನುತಿದೀರಲ್ಲ. ಇದು ನಿಮಗೆ ಸರಿಕಾಣುತಿದೆಯೆ? ಹಸಿ ಮೈಯಿನ ನೊಂದ ಹೆಂಗಸು ಮಕ್ಕಳೊಂದಿಗೆ ಈ ಗಾಡಿಯಲ್ಲಿ ಮೈಕೈ ನೋಯಿಸಿಕೊಂಡು ಬಂದರೆ ಆಕೆಗೆ ಹೇಳುವ ಮಾತು ಇದೇ ಏನು? ನನ್ನಂಥವನಿಗೇ ನೀವಾಡುವ ಮಾತನ್ನು ಕೇಳಿದರೆ ಎಷ್ಟು ಸಿಟ್ಟು ಬರುತದೆ. ಇನ್ನು ಶಾಸ್ತ್ರ ಪುರಾಣ ಓದಿದ ನಿಜವಾದ ವಿದ್ಯಾವಂತ ರಿಗೆ ಈ ನಡತೆ ನೋಡಿ ಹೊಟ್ಟೆ ಉರಿದು ಹೋಗಿಬಿಡುವುದು. ನಿಮ್ಮ

ಶಾಸ್ತ್ರದೊಳಗೆ, ಹೀಗೆ ಮಾಡುವುದು ಸರಿಯೆಂದು ಎಲ್ಲಿಯಾದರೂ ಹೇಳಿದೆಯೆ ಸ್ವಾಮಿ? ಯಾಕೆ ಹಾಗೆ ಹೆಂಗಸಿನ ಮೇಲೆ ಹಾರಾಡುತೀರಿ. ಒಳ್ಳೆಯ ಮಾತಿನಿಂದ ಕರೆಯಿರಿ" ಎಂದು ತುಂಬ ನೊಂದು ಆಡಿದ.

ಹನುಮಣ್ಣನ ಮಾತುಕೇಳಿ ಸೂರಪ್ಪನಿಗೆ ರೇಗಿತು. ಆತನನ್ನು ನುಂಗಿಬಿಡೋಣ, ಎನ್ನಿಸಿಬಿಟ್ಟಿತು. "ನೀನಾರಪ್ಪ, ಇವಳಕಡೆ ದುಡ್ಡಿಲ್ಲದ ಲಾಯರಿ! ನಾನು ಯಾರು, ಎಂದು ತಿಳಿದುಕೊಂಡೆ. ನಿನಗೂ ಈ ವಿಷಯಕ್ಕೂ ಏನು ಸಂಬಂಧ? ನಿನ್ನ ಕೆಲಸ ನೀನು ನೋಡಿಕೊ ಪರರ ಮನೆಯ ಗುಲಾಮ! ತನ್ನ ಚಾಕರಿ ತಾನು ಮಾಡಿಕೊಳ್ಳುವುದನ್ನು ಬಿಟ್ಟು ಬಿಟ್ಟು, ಯಾರ ಸಂಗಡ ಮಾತನಾಡುತಿದೇನೆ ಎಂಬ ಪರಿಜ್ಞಾನವಿಲ್ಲದೆ ಮನಸ್ಸಿಗೆ ಬಂದಂತೆ ಹರಟುತೀಯ. ತೆಪ್ಪಗಿರು?" ಎಂದು ಗದರಿಸಿದ.

ಹನುಮಣ್ಣನಿಗೆ ಬಹಳ ರೇಗಿತು. "ನೀವು ಯಾರೊಡನೆ ಮಾತಾಡುತಿದೀರೆಂದು ತಿಳಿದಿದೀರಿ. ನಾನೇನು ನಿಮ್ಮ ಮನೆಯ ಆಳೇನು, ನಿಮ್ಮ ಬಾಯಿಯಲ್ಲಿ ಸಾವಿರ ಮಾತು ಆಡಿಸಿಕೊಳ್ಳುವುದಕ್ಕೆ? ಮಾಡುವುದು ಅನಾಚಾರ ಮನೆಯ ಮುಂದೆ ವೃಂದಾವನ ಎಂದ ಹಾಗೆ. ದೊಡ್ಡ ಬ್ರಾಹ್ಮಣರಾಗಿದೀರಿ. ತಲೆಯೆಲ್ಲ ಹರಟುತಿದೀರಿ. ನೀವೊ ನಾನೊ ಮನಸ್ಸಿಗೆ ಬಂದಂತೆ ಹರಟುತಿರುವುದು? ನಾನು ಗೋವಿಂದರಾಯರ ಆಳಾಗಿ ಮಾತಾಡುತಿಲ್ಲ; ಗುಲಾಮನಾಗಿ ಮಾತಾಡುತಿಲ್ಲ. ಹನುಮಣ್ಣನಾಗಿ ಮಾತಾಡುತಿದೇನೆ. ಮಕ್ಕಳೊಡನೆ ಮನೆಗೆ ಬಂದ ಮೆತ್ತನೆಯ ಬಾಣಂತಿಗೆ ಮುಳ್ಳು ಚುಚ್ಚುವಂತೆ ಮಾತಾಡುತೀರ!....ಯಾವಾಗಲೂ ಇದೇ ನಿಮ್ಮ ದೌಲತ್ತೊ ಏನೊ ....... ... ಬ್ರಾಹ್ಮಣ ಜಾತಿಯಲ್ಲಿ ಯಾಕೆ ನಿಮ್ಮನ್ನು ಇನ್ನೂ ಇಟ್ಟಿದಾರೆಯೊ!" ಎಂದ.

"ಜಾತಿಯ ಸುದ್ದಿ ಎತ್ತಿದರೆ ಸಿಗಿದುಬಿಡುತೇನೆ, ನೋಡು. ನನಗೆ ರೇಗಿಬಿಟ್ಟಿದೆ. ತಲೆಯೆಲ್ಲ ಹರಟುತೀಯ" ಎಂದು ಅರಚುತ್ತ ಸೂರಪ್ಪ ಜಗಲಿಯ ಹತ್ತಿರ ಬಂದ.

"ಯಾರನ್ನೊ ಸಿಗಿಯೋದು....ಎಂದು ಬಲು ಸಿಟ್ಟಿನಿಂದ ಹನುಮಣ್ಣ ಮುಂದೆ ಹೊರಟ. ಮುದುಕನಾದರೂ ಆತ ಗಟ್ಟಿಗ.

ಸೀತಮ್ಮ ಓಡಿಬಂದು "ಹನುಮಣ್ಣ, ನಿನಗೇಕೆ ಬುದ್ಧಿಯಿಲ್ಲ

ಅವರ ತಂಟೆ ಬೇಡಪ್ಪ. ಸುಮ್ಮನಿರು ಏಕೆ ಅವರ ಮನಸ್ಸು ನೋಯಿಸು ತೀಯೆ. ನನ್ನ ದುರದೃಷ್ಟ. ಜಗಳ ಆಡಬೇಡಿ. ಆಮೇಲೆ ದೊಡ್ಡ ಯುದ್ಧ ಆಗಿಬಿಡುತದೆ. ನಾನು ನೋಡಲಾರೆ. ನಿಮ್ಮ ಜಗಳಕ್ಕೆ ನಾನು ಕಾರಣ. ನನಗಾಗಿ ನೀವೇಕೆ ಗುದ್ದಾಡುತೀರಿ" ಎಂದು ಇಬ್ಬರನ್ನೂ ಬಹಳ ಕೇಳಿ ಕೊಂಡಳು.

ಹನುಮಣ್ಣ "ನೀವು ಸುಮ್ಮನಿರಿ ತಾಯಿ. ನಿಮಗೆ ಗೊತ್ತಿಲ್ಲ. ನನಗೆ ಬುದ್ಧಿಯಿಲ್ಲವೊ ಇವನಿಗೆ ಬುದ್ಧಿಯಿಲ್ಲವೊ ತೋರಿಸಿಬಿಡುತೇನೆ" ಎಂದು ಮುಂದೆ ಧಾವಿಸಿದ. ಸೂರಪ್ಪ ಹನುಮಣ್ಣನನ್ನು ಹೊಡೆಯಲು ನುಗ್ಗಿ ಬಂದ. ಸೀತಮ್ಮನಿಗೆ ಗಾಬರಿಯಾಯಿತು. ಹನುಮಣ್ಣನ ಕೋಪ ಹೆಚ್ಚಿತು. ಅರುವತ್ತು ವರುಷದ ಜೀವಿಯಾದರೂ ಆಜಾನುಬಾಹು. ಬಿಳಿ ಮೀಸೆ ತಿರುವಿ ನಿಂತುಬಿಟ್ಟ. ಸೀತಮ್ಮ "ಅಯ್ಯೋ" ಎಂದು ಮಾವನವರ ಕಾಲಿಗೆ ಬಿದ್ದಳು. ಸೂರಪ್ಪ ಆಕೆಯನ್ನು ಎಡಗಾಲಲ್ಲಿ ಕೊಡಹಿ, ತಲೆಯ ಮೇಲೆ ಹಿಡಿ ಮಣ್ಣು ತೆಗೆದು ಸುರಿದ. ಹನುಮಣ್ಣನ ಕೈ ಸುಮ್ಮನಿರಲಿಲ್ಲ. ಮಣ್ಣು ಸುರಿದ ಸೂರಪ್ಪನ ಎರಡು ಕೈಗಳೂ ಆತನ ಮುಷ್ಟಿಯೊಳಗೆ ಸಿಕ್ಕಿ ವಿಲಿವಿಲಿ ಒದ್ದಾಡುವಂತಾದುವು. ಇಬ್ಬರಿಗೂ ದೊಡ್ಡ ಗುದ್ದಾಟ ಶುರುವಾಯಿತು. ಹನುಮಣ್ಣ ಸೂರಪ್ಪನಿಗೆ ಸರಿಯಾದ ಪೆಟ್ಟು ಕೊಟ್ಟ. ಎತ್ತಿ ನೆಲಕ್ಕೆ ಕುಕ್ಕಿಬಿಟ್ಟ. ಸೂರಪ್ಪ, ದಿಕ್ಕು ತೋಚದೆ ಹನುಮಣ್ಣನ ಬೆರಳನ್ನು ಕಟೂರನೆ ಕಡಿದುಬಿಟ್ಟ. ರಕ್ತ ಚಿಮ್ಮಿ ಹರಿಯಿತು. ಅಷ್ಟು ಹೊತ್ತಿಗಾಗಲೆ ಕೆಳಗಿನ ಬೀದಿಯಿಂದ, ಮೇಲಿನ ಬೀದಿಯಿಂದ ತಂಡೋಪ ತಂಡ ಜನ ಸೇರಿಬಿಟ್ಟರು. ಸತ್ಯನಾರಾಯಣ ಶೆಟ್ಟಿ ಬಂದು ಜಗಳ ನಿಲ್ಲಿಸಿದ. ಹನುಮಣ್ಣ ಶೆಟ್ಟಿಯನ್ನೇ ದುರುದುರು ನೋಡಿದ; ಶೆಟ್ಟಿ ಈತನನ್ನೇ ನೆಟ್ಟ ದೃಷ್ಟಿಯಿಂದ ನೋಡಿದ. ಗುಂಪಿನಿಂದ ಕದಲುತ್ತಿದ್ದವರೆಲ್ಲ "ಮುದುಕ ಸೂರಪ್ಪನಿಗೆ ಸರಿಯಾಗಿ ಕೊಟ್ಟ. ಪರವಾ ಇಲ್ಲ" ಎಂದುಕೊಂಡುಹೋಗು ತ್ತಿದ್ದರು. ಸೀತಮ್ಮ ಜ್ಞಾನ ತಪ್ಪಿ ಚರಂಡಿಯಲ್ಲಿ ಬಿದ್ದಿದ್ದಳು. ಲಲಿತ ಮಗು ಮತ್ತು ಇತರ ಮಕ್ಕಳೊಡನೆ 'ಅಮ್ಮಾ' ಎಂದು ಅಳುತ್ತ ಆಕೆಯ ಹತ್ತಿರ ಕುಳಿತಿದ್ದಳು. ಕೈಯ ರಕ್ತ ಸುರಿಯುತ್ತಿದ್ದರೂ ಮೂರ್ಛೆ ಹೋದ ವಳನ್ನು ಕಂಡು ಗಾಬರಿಯಿಂದ ಹನುಮಣ್ಣ ಓಡಿಬಂದ. ಎದುರುಮನೆಯ

ರಾಧಮ್ಮನವರೂ ಬಂದರು. ಅಲ್ಲಿಯೆ ಇದ್ದ ಶಾರದಮ್ಮನವರು ಬೇಗ ತಣ್ಣೀರು, ಬೀಸಣಿಗೆ ತಂದರು. ನೀರು ತಟ್ಟಿ ಗಾಳಿ ಬೀಸಿದ ಮೇಲೆ ಸ್ವಲ್ಪ ಜ್ಞಾನ ಬಂತು. ತಕ್ಷಣವೇ " ಹನುಮಣ್ಣಾ, ಬೇಡಪ್ಪಾ " ಎಂದಳು. ಅದಕೆ ಆತ " ಇಲ್ಲ ತಾಯಿ. ನಾನು ಜಗಳ ಆಡುತಿಲ್ಲ. ಇಲ್ಲಿ ನೋಡಿ. ನಾನು ಜಗಳ ಆಡುತಿಲ್ಲ ; ನಿಲ್ಲಿಸಿಬಿಟ್ಟೆ. ಎದ್ದೇಳಿ ತಾಯಿ " ಎಂದ. ಎದ್ದಳು. ರಾಧಮ್ಮ " ನಮ್ಮ ಮನೆಗೆ ಬಾ, ಸೀತಮ್ಮ. ನೀನು ಇಲ್ಲಿಯೆ ಕೆಲವು ದಿವಸ ಇರುವೆಯಂತೆ " ಎನ್ನುತ್ತ ಕೈ ಹಿಡಿದು ನಡಸಿಕೊಂಡು ಹೊರಟರು.

" ಛೆ, ನಿಮಗೇಕಮ್ಮ ಇಷ್ಟೊಂದು ತೊಂದರೆ ಕೊಡಬೇಕು. ಸೇರಿದ ಮನೆಯವರೇ ಹೋಗೆಂದು ತಳ್ಳುತಿರುವಾಗ ಮೂರನೆಯವರ ಮನೆಗೆ ಹೊರೆಯಾಗುವುದೆ ? ಛೆ ! ಛೆ ! " ಎನ್ನುತ್ತ ರಾಧಮ್ಮನವರ ಮನೆ ಹೊಕ್ಕಳು. ಗಾಡಿಯಲ್ಲಿದ್ದ ಸಾಮಾನುಗಳನ್ನೆಲ್ಲ ಅವರ ಮನೆಗೆ ಸಾಗಿಸಿದು ದಾಯಿತು. ಮಕ್ಕಳೂ ಅವರ ಮನೆಗೆ ಬಂದರು. ಹನುಮಣ್ಣ ಗಾಡಿ ಯನ್ನು ರಾಧಮ್ಮನವರ ಮನೆಯ ಮುಂದೆ ಎಳೆದು, ಎತ್ತುಗಳನ್ನು ಇಳಿಸಿದ ನೊಗಕ್ಕೆ ಕಟ್ಟಿ ಹುಲ್ಲು ಹಾಕುತ್ತಿದ್ದ. ಸೂರಪ್ಪ ಸುಮ್ಮನೆ ಕುಳಿತು ನೋಡು ತ್ತಿದ್ದ ; ಜಗಲಿಯ ಮೇಲಿದ್ದ ರೈಲುತಂಬಿಗೆ ಕಣ್ಣಿಗೆ ಬಿತ್ತು. ಬೇಗ ಅದನ್ನು ತೆಗೆದುಕೊಂಡು ಒಳಗೆ ಹೊರಟುಹೋದ.

ರಾಧಮ್ಮನವರು ಹಾಸಿದ ಚಾಪೆಯಮೇಲೆ ಸೀತಮ್ಮ ಮಲಗಿದ್ದಳು. ತಲೆತುಂಬ ಮಾವ ಎರಚಿದ ಬೀದಿಯ ಮಣ್ಣು. ಸೀರೆಯೆಲ್ಲ ಧೂಳಾ ಗಿತ್ತು. ಲಲಿತ ಅಳುತ್ತಿದ್ದ ಮಗುವನ್ನು ತೊಡೆಯಮೇಲೆ ಮಲಗಿಸಿ ಕೊಂಡು ಸಮಾಧಾನಪಡಿಸುತ್ತಿದ್ದಳು. ಶಾರದ ಗಾಡಿಯಲ್ಲಿದ್ದ ರೊಟ್ಟಿಯ ಗಂಟನ್ನು ನಡುಮನೆಯೊಳಗಿಟ್ಟು, ತಾಯಿಯ ಹತ್ತಿರ ಬಂದು "ಅಮ್ಮಾ, ತಾತ, ಹನುಮಣ್ಣನ ಕೈ ಕಡಿದುಬಿಟ್ಟ. ತುಂಬ ರಕ್ತ ಸುರಿದುಹೋಯಿತು" ಎಂದಳು. ಸೀತಮ್ಮನ ಮನಸ್ಸು ತಳಮಳಿಸಿತು.

" ಅಯ್ಯೋ, ಹನುಮಣ್ಣಾ " ಎಂದಳು.

ಗಾಡಿಯ ಕೀಲುಗಳನ್ನು ತೆಗೆದು ಒಳಗಿಡುತ್ತಿದ್ದ ಹನುಮಣ್ಣ ಬೇಗ ರಾಧಮ್ಮನವರ ಮನೆಯ ಪಡಸಾಲೆಗೆ ಬಂದ.

" ಹನುಮಣ್ಣ, ಕೈ ಹೇಗಿದೆ ? ನನಗಾಗಿ ನೀನೇಕಿಷ್ಟು ಗುದ್ದಾಡಿದೆ.

ನನ್ನ ಪಾಡು ಮೊದಲಿನಿಂದಲೂ ಹೀಗೆಯೆ; ಒಳ್ಳೆಯವರಿಗೇ ಕಷ್ಟಕೊಡು ತ್ತಿರುವುದು. ಕೈ ಏನಾಗಿದೆ ಹನುಮಣ್ಣ?" ಎನ್ನುತ್ತ ಎದ್ದು ಕುಳಿತಳು.

"ಏನೂ ಇಲ್ಲ ತಾಯಿ. ಈ ಎಡಗೈ ಕಿರಿಬೆರಳು ಆ ಮಾರೀಚನ ಬಾಯಿಗೆ ಸಿಕ್ಕಿಬಿಟ್ಟಿತು. ಕಡಿದುಬಿಟ್ಟ....ಬ್ರಾಹ್ಮಣನಂತೆ, ಬ್ರಾಹ್ಮಣ! ಮನುಷ್ಯನ ರಕ್ತ ಮುಟ್ಟುವುದಕ್ಕೆ ಹುಲಿ ಸಹ ಹೆದರಿ ನಡಗುತದೆ. ಈತ ಕಚ್ಚಿ ಹೀರಿಬಿಟ್ಟ; ಬೆರಳನ್ನು ಕತ್ತರಿಸೇಬಿಟ್ಟ. ಬ್ರಾಹ್ಮಣರೆಲ್ಲ ಏತಕ್ಕಿಟ್ಟು ಕೊಂಡಿದೀರಿ, ಇನ್ನೂ ಈ ಪಾಪಿಯನ್ನು?....ನಿಮ್ಮ ಜಾತಿಯಲ್ಲಿ ಕಟ್ಟು ನಿಟ್ಟು ಏನೂ ಇಲ್ಲನೆಂದು ಕಾಣುತದೆ ...ಸ್ವಲ್ಪ ಸುಣ್ಣ ಕೊಡಿ ತಾಯಿ. ಈ ಗಾಯಕ್ಕೆ ಹಾಕಿ ಕಟ್ಟಿಬಿಡುತೇನೆ. ಇಲ್ಲದಿದ್ದರೆ ಈ ರಕ್ತ ನಿಲ್ಲುವುದಿಲ್ಲ" ಎಂದು ರಾಧಮ್ಮನವರನ್ನು ಕೇಳಿ, ರಕ್ತದಲ್ಲಿ ನೆಂದಿದ್ದ ಬಟ್ಟೆಯನ್ನು ಬಿಚ್ಚಿ ಹೊರಗೆ ಹಾಕಿದ.

ರಾಧಮ್ಮನವರು ವೀಳೆಯದೆಲೆಯಮೇಲೆ ಸ್ವಲ್ಪ ಸುಣ್ಣವನ್ನೂ ಬೇರೊಂದು ಬಟ್ಟೆಯ ಚೂರನ್ನು ತಂದುಕೊಟ್ಟರು. ಸುಣ್ಣಹಾಕಿ ಬಟ್ಟೆ ಕಟ್ಟುತ್ತ ಬೀದಿಯ ಬಾಗಿಲಲ್ಲಿಯೇ ಹನುಮಣ್ಣ ಕುಳಿತುಕೊಂಡ. ಎಂಥ ಪಾಪಿಯನ್ನು ಮನೆಯೆದುರಿಗಿಟ್ಟುಕೊಂಡಿದೀರಿ ತಾಯಿ? ನಿಮ್ಮಂಥ ಕರುಣಿ ಗಳು ದಿನಬೆಳಗಾದರೆ ಈ ಗೂಬೆಯ ಮುಖ ನೋಡಬೇಕಲ್ಲ; ಪಿಶಾಚಿ ಮುಂಡೇಮಗ ...ಜಗಳ ಆಗುತಿದ್ದರೆ ಜನ ನಿಂತು ನೋಡುತಿದ್ದರೇ ಹೊರತು ಒಬ್ಬರೂ ಬಂದು ಆ ಪಾಪಿಯೊಡನೆ ಗುದ್ದಾಡುವ ಗಂಡಸಿರಿಲ್ಲಿಲ್ಲ. ಎಲ್ಲ ತಮಾಷೆ ನೋಡುತಿದ್ದರು. ಈ ಊರಿನವರಿಗೆ ಅವನನ್ನು ಕಂಡರೆ ಇಷ್ಟೊಂದು ಹೆದರಿಕೆಯೆ? ಹೋಗಲಿ. ಆತ, ಆ ಬಡಹೆಣ್ಣುಮಗಳನ್ನು ಮೂರು ತಿಂಗಳ ಹಸಿಮೈ ಬಾಣಂತಿಯನ್ನು–ಎಳೆ ಮಕ್ಕಳ ತಾಯಿಯನ್ನು ಎಡಗಾಲಿಂದ ಒದೆದು, ತಲೆಯಮೇಲೆ ಹಿಡಿ ಮಣ್ಣು ಸುರಿದಮೇಲಾದರೂ ಜನಕ್ಕೆ ತಾಳ್ಮೆ ಇರುವುದುಂಟೆ! ನನ್ನಂಥ ಮುದುಕನಿಗೇ ಆಗ ಎಂದೂ ಇಲ್ಲದ ಕೋಪ ಬಂದುಬಿಟ್ಟಿತು. ನೀವಂತೂ ಹೆಂಗಸರು. ಆ ಎದುರು ಮನೆಯ ತಾಯಿ ಹೆಂಗಸು. ಈ ಸಾಲು ಮನೆಯವರೆಲ್ಲ ನಿಂತು ನೋಡು ತಿದ್ದರಲ್ಲ! ಎಲ್ಲ ಗಂಡಸರು. ಉದ್ದನಾಗಿ ದಪ್ಪಗೆ ಬೆಳೆದವರೆ. ಆಟ ನೋಡು ತಿದ್ದರೇನೊ. ಆ ಬೋರ್ಡು ಇರುವ ಮನೆಯ ಮುಂದೆ ಕರಿಯ ಕೋಟು

ಹಾಕಿಕೊಂಡು ದಪ್ಪಗಿರುವ ಒಬ್ಬರು ನಿಂತಿದ್ದರು. ಅವರಿಗೆ ನ್ಯಾಯ ಅನ್ಯಾಯ ಎಲ್ಲ ಗೊತ್ತು. ಆದರೂ ಅವರೂ ಆಟ ನೋಡುತಿದ್ದರು. ಹೆಣ್ಣು ಮಗಳು ಚರಂಡಿಯಲ್ಲುರುಳಿದ್ದು ನೋಡಿ ಆನಂದವಾಯಿತೇನೊ. ಅಲ್ಲದೆ ಎಲ್ಲ ಬ್ರಾಹ್ಮಣರು. ನಾನು ಸಿಟ್ಟುಗೊಂಡು ನಾಲ್ಕು ಗುದ್ದಿದ ಮೇಲೆ ಬೀದಿಯಲ್ಲಿ ನೋಡುತಾ ನಿಂತಿದ್ದ ಕೆಲವರು ಹತ್ತಿರ ಬಂದರು ಯಾರಿಗೂ ಯಾವುದು ನ್ಯಾಯ, ಯಾವುದು ಅನ್ಯಾಯ ತಿಳಿಯದು. ಎಂಥ ಹುಚ್ಚು ಜನ. ಥೂ!'' ಎಂದು ಹೇಳಿದ್ದ.

ಸೀತಮ್ಮ "ಹನುಮಣ್ಣಾ'' ಎಂದು ಕೂಗಿದಳು. ಹೊರಗೆ ಜಗಲಿಗೆ ನಡೆದಿದ್ದ ಹನುಮಣ್ಣ ಕೂಗು ಕೇಳಿ ಒಳಗೆ ಬಂದ. ಆಕೆಗೆ ಸೂರಪ್ಪ ಕೂಗಾಡುತ್ತಿದ್ದುದು ಕೇಳಿಸಿತು. ಹನುಮಣ್ಣ ಜಗಲಿಯ ಮೇಲಿದ್ದರೆ, ಆ ಕೂಗಾಟ ಕೇಳಲಾರದೆ ಏನಾದರೂ ಅನಾಹುತ ನಡಸಿಬಿಟ್ಟಾನೆಂದು ಆಕೆಗೆ ಭಯ. ಆದುದರಿಂದ "ಇಲ್ಲಿಯೇ ಕುಳಿತುಕೊ ಹನುಮಣ್ಣ. ನೀನು ಹೊರಗೆ ಹೋಗಬೇಡ" ಎಂದಳು. ಆತ "ಆಗಲಿ ತಾಯಿ" ಎಂದು ಹೇಳಿ ಬೀದಿಯ ಬಾಗಿಲಿಗೆ ಒರಗಿ ಕುಳಿತ. ಎಲೆಯ ಮೇಲಿದ್ದ ಒಳ್ಳೆಯ ಸುಣ್ಣ ಕಂಡು, ಎಲೆ ಹಾಕಿಕೊಳ್ಳಬೇಕೆನಿಸಿತು. ತಂಬಾಕಿನ ಚೀಲ ತೆಗೆದುಕೊಂಡ. ಹಾಗೆಯೇ ಹೊರಗಾಗುತ್ತಿದ್ದ ಗಲಾಟೆಗೆ ಕಿವಿಗೊಟ್ಟ.

ಸೂರಪ್ಪನಿಗೆ ಬೇರೆ ಏನೂ ಕೆಲಸವಿರಲಿಲ್ಲ. ಹನುಮಣ್ಣನ ಗುದ್ದು ತುಂಬನೋವನ್ನುಂಟುಮಾಡಿತ್ತು. ಸಿಟ್ಟು ಮಿತಿಮೀರಿತ್ತು. ಅಡುಗೆಗಿಟ್ಟು ಜಗಲಿಯ ಮೇಲೆ ಕುಳಿತು ಕೂಗಾಡುತ್ತಿದ್ದ; ಹಾರಾಡುತ್ತಿದ್ದ:

"... .. ನನ್ನೊಡನೆ ಗುದ್ದಾಡಲು ಇದುವರೆಗೆ ಈ ಊರಿನಲ್ಲಿ ಒಬ್ಬನಿಗೂ ಸರಿಯಾದ ಧೈರ್ಯವಿಲ್ಲ. ಹಾಗಿರುವಾಗ ಈ ಮುದಿಗುಲಾಮ ನನಗೆ ಹೊಡೆದುಬಿಟ್ಟ. ಅದಕ್ಕೇ ಸರಿಯಾದ ಪ್ರತಿಫಲ ತಿಂದ. ಕರ್ಮಕ್ಕೆ ತಕ್ಕ ಫಲ. ಪಾಪಿ! ಬ್ರಾಹ್ಮಣನನ್ನು ರೇಗಿಸಬಾರದು; ರೇಗಿಸಿದರೆ ಪರಶುರಾಮನಾಗಿ ಬಿಡುತಾನೆ. ಅವನಿಗೇನೂ ತಿಳಿದಿಲ್ಲ. ಮಣ್ಣು ಕೇಳುವ ಮುದ್ದಿಗೆ ತಲೆಯೆಲ್ಲಿದೆ? ಆ ಅವಿಧೇಯ ಹೆಂಗಸನ್ನು ವಹಿಸಿಕೊಂಡು ಮಾತಾಡುವುದಕ್ಕೆ ಬರುತಾನೆ ... .. ಏನೆಂದು ತಿಳಿದಿದಾನೆ. ಯಾರೆದುರಿಗೆ ಮಾತಾಡುತಿದೇನೆಂದು ತಿಳಿದಿದಾನೊ ....... ನೋಡುತೇನೆ. ಇನ್ನೂ ಬರಲಿ;

ಮನೆಯ ಮೆಟ್ಟಿಲುಗಲ್ಲು ಹತ್ತಲಿ ಆ ಹೆಣ್ಣು, ನೋಡೋಣ........ಸೊಸೆಯೆಂದರೆ ಕುತ್ತಿಗೆಗೆ ಕಟ್ಟಿಕೊಂಡ ಕುಂಟೆಯಾದಳಲ್ಲ! ಮೊದಲಿಂದಲೂ ನಮ್ಮ ಮನೆಗೆ ಸುಖವಿಲ್ಲ. ಈಕೆ ಮಹಾರಾಣಿ-ಎಂದು ನಮ್ಮ ಮನೆಯೊಳಗೆ ಕಾಲಿಟ್ಟಳೊ ಅಂದೇ ಆ ದುರ್ದೈವ ಬಡಿದುಕೊಂಡಿತು........ಇನ್ನು ನಮ್ಮ ಮನೆಗೆ ಬರಲಿ. ಇವಳಿಗೇನು ನಾವು ಪತ್ರ ಬರೆದುಕೊಟ್ಟಿದೇವೇನು? ಸಾಯುವ ತನಕ ಅನ್ನ ಹಾಕುತೇವೆ, ಎಂದು........ಇನ್ನು ಬರಲಿ, ನೋಡೋಣ. ಆಕೆಯನ್ನು ಮನೆಗೆ ಸೇರಿಸಿದರೆ ನಾನು ಬ್ರಾಹ್ಮಣನೇ ಅಲ್ಲ. ತವರುಮನೆಯಿಂದ ಬರಿಗೈಯಲ್ಲಿ ತಾರಮ್ಮಯ್ಯ ಆಡಿಕೊಂಡು ಬರುತಾಳೆ, ಎಲ್ಲ ನಾವು ತೆರಬೇಕು. ನಮಗೇನು ದರದು?........ಆಕೆಯನ್ನು ಹೊಸ್ತಿಲೊಳಗೆ ಸೇರಿಸಿದರೆ ನಾನು ಚಂಡಾಲ!........"

ಹನುಮಣ್ಣ ಸುಮ್ಮನೆ ಕೇಳುತ್ತ "ತಾಯಿ ಸೀತಮ್ಮ, ತಿಂದ ಗುದ್ದುಗಳು ಸಾಲದೇನೊ, ಇನ್ನೂ ತಲೆಯೆಲ್ಲ ಹರಟುತಿದಾನೆ. ಬೇಕಾಗಿದೆ, ಎಂತ ಕಾಣುತದೆ. ಹೊಡೆತ ತಿನ್ನಬೇಕೆಂದರೆ ಬಹಳ ಆಸೆ" ಎಂದ.

ರಾಧಮ್ಮ, ಇನ್ನು ಹನುಮಣ್ಣ ಎಲ್ಲಿ ಪುನಃ ವ್ಯಾಜ್ಯಕ್ಕೆ ಹೋಗುತ್ತಾನೊ ಎಂಬ ಗಾಬರಿಯಿಂದ "ಹನುಮಣ್ಣಾ, ಏಳಪ್ಪ. ಕೈಕಾಲು ಮುಖ ತೊಳೆದುಕೊ. ಇದೊ ನೀರಿದೆ. ಬಿಸಿ ಬಿಸಿ ಕಾಫಿ ಮಾಡಿದೇನೆ" ಎಂದರು. ಆತ ನೀರು ತೆಗೆದುಕೊಂಡು ಹೊರಗೆ ಹೋದ. ರಾಧಮ್ಮನವರು ಸೀತಮ್ಮನ ತಲೆಯ ಮೇಲಿನ ಮಣ್ಣನ್ನು ಝಾಡಿಸಿ, ಕೈಕಾಲು ತೊಳೆದುಕೊಳ್ಳಲು ಹೇಳಿದರು. ಅಡುಗೆಯವನು ಬಿಸಿ ಬಿಸಿ ಕಾಫಿ ತಂದು ಎಲ್ಲರಿಗೂ ಕೊಟ್ಟ.

ಆಗಲೆ ಸಂಜೆ ಏಳು ಗಂಟೆಯಾಗಿತ್ತು. ಎಂಟು ಗಂಟೆಯವರೆಗೂ ಹನುಮಣ್ಣ ಸಿಟ್ಟಿನಿಂದ ಏನೇನೋ ಹರಟುತ್ತಿದ್ದ. ರಾಧಮ್ಮ ಬಾಣಂತಿ ಮಕ್ಕಳನ್ನು ಊಟಕ್ಕೆಬ್ಬಿಸಿದಳು.

ಎಲೆಗೆ ತುಪ್ಪ ಬಡಿಸುತ್ತ "ಊರು ಬಿಟ್ಟಿದ್ದು ಯಾವಾಗಲೊ, ಏನೊ. ಪಾಪ, ಮಕ್ಕಳು ಹೇಗೆ ಹಸಿವು ತಡೆದಾರಮ್ಮ. ಬಾಣಂತಿಗೆ ಹೊತ್ತು ಹೊತ್ತಿಗೆ ಹೊಟ್ಟೆಗೆ ಬೀಳದಿದ್ದರೆ ತುಂಬ ಸಂಕಟವಾಗುತದೆ. ದಿನಬಿಟ್ಟು ದಿನ ಬೆಳಗ್ಗೆ ಎಣ್ಣೆನೀರು ಹಾಕಿ, ಸಿಹಿಸಜ್ಜಿಗೆ ಮಾಡಿಕೊಡಬೇಕು. ಮೈಯೊಳಗಿನ ಉರಿ, ಹೊಟ್ಟೆಯೊಳಗಿನ ಸಂಕಟ ಹೋಗಲು ತುಂಬ ತುಪ್ಪ,

ಬೀಳಬೇಕು. ಆದರೆ ಈ ಪಾಪ, ಒಂದು ದಿನವೆಲ್ಲಾ ಉಪವಾಸದಿಂದ ಮೈ ಕೈಯೆಲ್ಲಾ ನೋಯಿಸಿಕೊಂಡು ಅಷ್ಟು ದೂರ ಗಾಡಿಯಲ್ಲಿ ಬಂದ ಬಾಣಂತಿಯ ತಲೆಯ ಮೇಲೆ ಮಣ್ಣು ಸುರಿಯುತಾನೆ. ಪಾಪಿ!" ಎಂದಳು.

ಸೀತಮ್ಮ " ಇಲ್ಲ ರಾಧಮ್ಮ, ಬೆಳಗ್ಗೆ ಮಧುಕೆರೆಯ ಮಂಟಪದಲ್ಲಿ ಅಡುಗೆ ಮಾಡಿದ್ದೆ. ಹನುಮಣ್ಣ ಇದ್ದಲ್ಲಿ ನನಗೆ ತೊಂದರೆಯೇ ಇಲ್ಲ. ಆತನೇ ನನ್ನ ಭಾಗಕ್ಕೆ ನಿಜವಾದ ದೇವರು-ತಂದೆ" ಎಂದಳು.

ಬದನೆಕಾಯಿಯ ಹುಳಿ ಬಹಳ ರುಚಿಯಾಗಿತ್ತು. ಆದರೆ ಸೀತಮ್ಮ ನಿಗೆ ದೊಡ್ಡ ಚಿಂತೆ ಬೆನ್ನು ಹಿಡಿದಿದ್ದುದರಿಂದ ಅನ್ನ ಸೇರಲಿಲ್ಲ. " ಮನೆ ಬಿಟ್ಟು ಹೊರಗೆ ಹಾಕಿದರು. ಮುಂದೇನು ಮಾಡಲಿ ? ಎಲ್ಲಿಗೆ ಹೋಗಲಿ"? ಎಂಬುದು ಬಗೆ ಹರಿಯಲಿಲ್ಲ. ರಾಧಮ್ಮನಿಗೆ ತುಂಬ ಸಿಟ್ಟು ಬಂತು. " ಸೀತಮ್ಮ ನೀನು ಹೀಗೆ ಇಂದು ಅನ್ನ ಬಿಟ್ಟರೆ, ನನಗೆ ಕೋಪ ಬರುತ್ತದೆ, ನೋಡು. ಆ ಬತ್ತಿಗೆ ಹೊತ್ತುಹೊತ್ತಿಗೆ ಹಾಲು ಬರಬೇಕೊ ಬೇಡವೊ. ಈ ಮಕ್ಕಳ ಗತಿಯೇನು ? ನೀನೇನೂ ಯೋಚಿಸಬೇಡಮ್ಮ ಕೆಲವು ದಿನ ನಮ್ಮ ಮನೆಯಲ್ಲಿಯೇ ಇರು. ಸರ್ಕೀಟಿನಿಂದ ಅವರು ಬಂದ ಮೇಲೆ ನಾನು ಅವರಿಗೆ ಎಲ್ಲವನ್ನೂ ತಿಳಿಸುತೇನೆ . ಅವರು ಏನೂ ಅನ್ನುವುದಿಲ್ಲ. ನೀನು ಮನಸ್ಸಿಗೆ ಏನೂ ತಿಳಿದುಕೊಳ್ಳಬೇಡ ... .. ಊಟ ಮಾಡದೆ ಹೋದರೆ ನಾನೂ ಇಂದು ಊಟ ಮಾಡುವುದಿಲ್ಲ"ಎಂದಳು.

ಸೀತಮ್ಮ ಸ್ವಲ್ಪ ಹೊತ್ತು ಸುಮ್ಮನೆ ಎಲೆಯನ್ನೇ ನೋಡುತ್ತ ಕುಳಿತಿದ್ದಳು. ಆಮೇಲೆ ಇದ್ದಕ್ಕಿದ್ದ ಹಾಗೆಯೆ " ಇಲ್ಲ, ನನಗೇನು ಚಿಂತೆ ! ಇವರ ಮನೆಯೇ ನನಗೆ ಬೇಕಾಗಿಲ್ಲ ... ...ಯಾರಿಗೆ ಬೇಕಾಗಿದೆ ? ಮಲ್ಲಿಗೆ ಹಳ್ಳಿಯಲ್ಲಿ ನಮ್ಮಜ್ಜಿ ಇದಾಳೆ ; ನಮ್ಮ ತಾಯಿಯ ತಾಯಿ. ಆಕೆ ಪದೇ ಪದೇ ಕಾಗದ ಬರಿಯುತಲೇ ಇದ್ದಳು. ಇವರ ಅಧೀನದಲ್ಲಿದ್ದ ನಾನು, ಅವಳಿಗೊಂದು ಕಾಗದ ಸಹ ಹಾಕಲು ಸಾಧ್ಯವಾಗಲಿಲ್ಲ. ಆಕೆ ಪಾಪ ಹಣ್ಣು ಹಣ್ಣು ಮುದುಕಿ. ಅಲ್ಲಿಗೆ ಹೋಗುತೇನೆ. ಹನುಮಣ್ಣನನ್ನು ಕೇಳಿಕೊಂಡರೆ, ಸಂತೋಷದಿಂದ ಬಿಟ್ಟು ಬರುತಾನೆ. ನನಗೇನೂ ಚಿಂತೆಯಿಲ್ಲ, ರಾಧಮ್ಮ. ಊಟ ಮಾಡುತೇನೆ. ಈಗೇಕೋ ಮನಸ್ಸು ತುಂಬ ಕಲ್ಲಾಗುತಿದೆ. ಊಟ ಮಾಡುತೇನೆ" ಎಂದು ಸರಸರನೆ, ಹುಚ್ಚುಹುಚ್ಚಾಗಿ ತುತ್ತು

ತುರುಕಿಕೊಂಡಳು.

ಆಕೆ ತಕ್ಕಮಟ್ಟಿಗೆ ಊಟ ಮಾಡಿದಳು. ಬಲು ಹಸಿವೆಯಾಗಿರ ಬಹುದು. ರಾಧಮ್ಮನಿಗೆ ಸಂತೋಷವಾಯಿತು. ಆದರೆ ಅಜ್ಜಿಯ ಮನೆಗೆ ಹೋಗುವ ವಿಷಯದಲ್ಲಿ ತಮ್ಮ ಅಭಿಪ್ರಾಯ ಸೂಚಿಸಲು ಕಾತರರಾಗಿ ದ್ದರು. ಮೊಸರು ಬಡಿಸುತ್ತ "ಸೀತಮ್ಮ, ನಮ್ಮ ಯಜಮಾನರು ನಾಡಿದ್ದು ಬರುತಾರೆ. ಅವರು ಬಂದನಂತರ ನಾನು ಅವರಿಗೆ ಈ ಎಲ್ಲ ವಿಷಯ ಗಳನ್ನೂ ತಿಳಿಸುತೇನೆ. ಅವರು ತಿಳಿದವರು ಆಮೇಲೆ. ಅವರು ಹೇಳಿದಂತೆ ಮಾಡು. ಈಗಲೇ ಏಕೆ ದುಡುಕಿ ಹೋಗಿಬಿಡುತೀಯೆ?'' ಎಂದಳು.

ಸೀತಮ್ಮ "ರಾಧಮ್ಮ, ನಿಮ್ಮ ಕನಿಕರದ ಮಾತು ಈ ಬಡವಿಯ ಮೇಲಿರುವ ನಿಮ್ಮ ಅಭಿಮಾನದ ಆಳ ತೋರಿಸುತದೆ. ಆದರೆ ನಮ್ಮ ಮಾವ ನವರ ವಿಷಯ ನಿಮಗೆ ಚೆನ್ನಾಗಿ ಗೊತ್ತು. ಆತ ಹಠಮಾರಿ. ಎಂದೆಂದಿಗೂ ಶಪಥ ಬದಲಾಯಿಸುವುದಿಲ್ಲ. ಹಿಡಿದದ್ದೇ ಹಠ. ಆತನನ್ನೊಪ್ಪಿಸುವುದು ಬ್ರಹ ನಿಂದಲೂ ಸಾಧ್ಯವಿಲ್ಲ. ಇನ್ನು ನನ್ನ ಈ ಊರ ಜೀವನ ಕೊನೆಗೊಂಡ ಹಾಗೆಯೆ. ನಾನು ಎಷ್ಟು ವರುಷಗಳಿಂದ ಈ ಹಟದ ಮಾತು ನನ್ನ ಮಾವ ನವರ ಬಾಯಿಂದ ಹೊರಡಬಾರದೆಂದು ದೇವರನ್ನು ಪ್ರಾರ್ಥಿಸುತಿದ್ದೆ. ಎಲ್ಲಿ ನನಗೆ ಈ ಕಟ್ಟಪ್ಪಣೆ ಮಾಡಿಬಿಡುತಾರೊ, ಎಂದು ತುಂಬ ಹೆದರಿ ನಡೆ ಯುತಿದ್ದೆ. ಆದರೆ ದೇವರು ಕೈಬಿಟ್ಟ. ನನ್ನ ಯಜಮಾನರು ಸಹ ಊರಲ್ಲಿಲ್ಲ ವಂತೆ. ರಾಜುವೂ ಕಾಣಿಸಲಿಲ್ಲ. ನಮ್ಮತ್ತೆಯವರೂ ಇಲ್ಲ. ಏನು ಕತೆಯೊ! ನನಗೊಂದೂ ತಿಳಿಯದು. ನೀವು ಹೇಳುವಂತೆ ಇನ್ನು ಎರಡು ಮೂರ ದಿನ ಇದ್ದರೆ ನನ್ನನ್ನು ಮಲ್ಲಿಗೆಹಳ್ಳಿಗೆ ಕರೆದುಕೊಂಡು ಹೋಗವರಾರು? ಆ ಊರಿಗೆ ಬಸ್ಸಿಲ್ಲ. ಗಾಡಿಯ ರಸ್ತೆಯಂತೂ ಸ್ವಲ್ಪವೂ ಚೆನ್ನಾಗಿಲ್ಲವಂತೆ ಯಾರು ತಾನೇ ನನಗಾಗಿ ಗಾಡಿಕಟ್ಟುತಾರೆ. ಈಗ ಪುರಸತ್ತಿರುವುದೇ ಅಪ ರೂಪ. ನಮ್ಮ ಹನುಮಣ್ಣನಾದರೆ, ಬಹಳ ಸಂತೋಷದಿಂದ ನನ್ನನ್ನು ಕರೆದುಕೊಂಡು ಹೋಗುತಾನೆ; ನನ್ನ ತಂದೆಗಿಂತ ಹೆಚ್ಚು. ನನ್ನನ್ನು ಕೈಗೂಸಿನಿಂದ ಎತ್ತಿ ಆಡಿಸಿದವನು. ಎತ್ತು ಗಾಡಿಯೂ ಚೆನ್ನಾಗಿವೆ. ಅಲ್ಲದೆ ಗುಡ್ಡದಪುರದ ಹೊಳೆ ದಾಟಬೇಕು. ಅಲ್ಲಿಂದ ಒಂದು ಮೈಲಿ ಮುಂದೆ ಹೋಗ ಬೇಕು. ಈಗ ಹೊಳೆಯಲ್ಲಿ ನೀರು ಎಷ್ಟಿದೆಯೊ. ಆದುದರಿಂದ ನಾನು

ಈಗಲೇ ಹೊರಟರೆ ಹನುಮಣ್ಣ ನನಗೆ ಏನೂ ತೊಂದರೆ ಬರದಂತೆ ನೋಡಿ ಕೊಳ್ಳುತಾನೆ. ನಾನು ಬೆಳಗ್ಗೆಯೆ ಹೊರಟುಬಿಡುತೇನೆ. ಮೂರು ತಿಂಗಳಾ ದಮೇಲೆ ಮತ್ತೊಮ್ಮೆ ಬರುತೇನೆ. ಆಗಲಾದರೂ ಮನೆಗೆ ಸೇರಿಸಿಕೊಂಡರೆ ನನ್ನ ಅದೃಷ್ಟ" ಎಂದು ಹೇಳುತ್ತ ಎದ್ದು ಕೈ ತೊಳೆಯುಲು ಹೋದಳು.

ಹನುಮಣ್ಣ ಮಕ್ಕಳ ಹಾಸಿಗೆ ಬಿಚ್ಚಿ, ಪಡಸಾಲೆಯ ಒಂದೆಡೆ ಹಾಸಿದ್ದ. ತಾಯಿ ಎಲೆಅಡಕೆ ಹಾಕಿಕೊಂಡು ಬರುವುದರೊಳಗಾಗಿ ಲಲಿತ, ತಾಯಿ–ಮಗುವಿನ ಹಾಸಿಗೆ ಹಾಸಿದಳು. ಮುಂಗಡಿಕೂಸು ರಾಮು, ಶಾರದ ಬೇಗ ಮಲಗಿಬಿಟ್ಟರು. ಅಡುಗೆಯವನು ಪಡಸಾಲೆಯಲ್ಲಿ ಹನು ಮಣ್ಣನಿಗೂ ಅಡುಗೆಮನೆಯಲ್ಲಿ ರಾಧಮ್ಮನವರಿಗೂ ಎಲೆ ಹಾಕಿ ಬಡಿಸಿದ. ಲಲಿತ ಎಳೆ ಮಗುವನ್ನು ಹಾಸಿಗೆಯ ಮೇಲೆ ಮಲಗಿಸಿ ತಟ್ಟಿ ನಿದ್ದೆ ಮಾಡಿ ಸುತ್ತಿದ್ದಳು. ಸೀತಮ್ಮ ಅಡುಗೆಯ ಮನೆಯಲ್ಲೊಂದು ಕಡೆ ಕುಳಿತು ಏನೇನೊ ಹರಟುತ್ತಿದ್ದಳು. ತವರೂರಿನ ಸುಖ ಹೇಳಿಕೊಂಡಳು; ತಂದೆ, ತಮ್ಮ ಎಲ್ಲರ ಕತೆಯೂ ಪೂರೈಸಿತು.

"ತವರೂರಿನಲ್ಲಿಯೂ ನಿಮ್ಮಂಥ ಕರುಣೆಗಳು ಕೆಲವರಿದ್ದುದರಿಂದ ನಾನು ಸುಖವಾಗಿ ಆರು ತಿಂಗಳು ಕಳೆದೆ. ತುಳಸೀಬಾಯಿಯನ್ನೂ, ಶಂಕ ರಮ್ಮನವರನ್ನೂ ಇಂಥ ತಂಪು ಹೊತ್ತಿನಲ್ಲಿಯೇ ನೆನಸಬೇಕು. ಪಾಪ, ನನ್ನನ್ನು ಕಂಡರೆ ಅವರಿಗೆ ತುಂಬ ಪ್ರೀತಿ" ಎಂದಳು.

ರಾಧಮ್ಮನವರ ಊಟ ಮುಗಿಯಿತು. ಹನುಮಣ್ಣ ಆಗಲೇ ಜಗ ಲಿಯ ಮೇಲೆ ಹಾಸಿಗೆ ಹಾಕಿಕೊಂಡು ಎಲೆಅಡಕೆ ಹಾಕಿಕೊಳ್ಳುತ್ತಿದ್ದ. ಗಂಟೆ ಒಂಬತ್ತರ ಮೇಲಾಗಿತ್ತು. ಸೀತಮ್ಮ ಮಲ್ಲಿಗೆ ಹಳ್ಳಿಗೆ ಹೋಗುವ ಸಲಹೆಯನ್ನು ಸೂಚಿಸಿ, ನಾಳೆಯೆ ಗಾಡಿಯಲ್ಲಿ ಕರೆದುಕೊಂಡು ಹೋಗ ಬೇಕೆಂದು ಹೇಳಿಕೊಂಡಳು. ಆತ ಸಂತೋಷದಿಂದೊಪ್ಪಿದ. "ಆಗಲಿ, ತಾಯಿ. ದೂರ ಇದ್ದುಕೊಂಡೆ ಈ ಭಿಕಾರಿಯ ಮೇಲೆ ಕೇಸು ಮಾಡಬೇಕು. ಬಿಡಬಾರದು" ಎಂದ.

ರಾಧಮ್ಮ, ಆರು ತಿಂಗಳಿಂದೀಚೆಗೆ ನಡೆದ ಮಾವನ ಮನೆಯ ಕತೆ ಹೇಳುವ ಕುತೂಹಲದಲ್ಲಿದ್ದಳು. ತವರು ಮನೆಯ ಕಷ್ಟದ ಕತೆಯನ್ನು ಕೇಳಿದ ಆಕೆಗೆ ಕುತೂಹಲ ಇನ್ನೂ ಹೆಚ್ಚಿತು. ಹೆತ್ತ ತವರೂ ಕೈ ಬಿಟ್ಟು,

ಸೇರಿದ ಮನೆಯವರೂ ಓಡಿಸಿರುವ ಈಕೆಯ ಬಾಳನ್ನು ನೋಡಿ, ಆಕೆಗೆ ತುಂಬ ದುಃಖವಾಯಿತು. ಅಲ್ಲದೆ ಮಾವನ ಮನೆಯವರು ನಡಸುತ್ತಿರುವ ನೀಚ ಪಿತೂರಿಯ ಕತೆ ತಿಳಿದಿತ್ತು. ದುಃಖ ಇಮ್ಮಡಿಯಾಯಿತು. ಮಾತಾಡದೆ ಸುಮ್ಮನೆ ಕುಳಿತುಕೊಳ್ಳಲು ಮನಸ್ಸೊಪ್ಪಲಿಲ್ಲ. ನಡೆದ ಕತೆ ಹೇಳಲು ಮೊದಲು ಮಾಡಿದಳು :

"ನೀನು ಊರಿಗೆ ಹೋದಮೇಲೆ ನಿಮ್ಮ ಮಾವನವರ ಮನೆ ತುಂಬ ಬದಲಾಯಿಸಿದೆ. ಶ್ರೀಕಂಠಪುರದಿಂದ ಒಬ್ಬ ಶೆಟ್ಟರು ಬಂದಿದ್ದರು. ಅದೇನೊ, ನಿಮ್ಮ ಮಾವನವರು ಅವರಿಗೆ ದುಡ್ಡು ಕೊಡಬೇಕಂತಲ್ಲ; ಅದರ ವಸೂಲಿಗೆ ಬಂದಿದ್ದರು. ಆಗ ಏನೇನೊ ಗಲಾಟೆಯಾಯಿತು. ಕೊನೆಗೆ ಸಮಾಧಾನಪಟ್ಟುಕೊಂಡು ಆ ಶೆಟ್ಟಿ ಊರಿಗೆ ಹೊರಟು ಹೋದ. ಅಂದಿನಿಂದ ನಿಮ್ಮತ್ತೆಯ ಮನೆ ಬಹಳ ಬದಲಾಯಿಸಿದೆ. ಆ ಶೆಟ್ಟಿ ತಿಪ್ಪಾಜೋಯಿಸರ ಸ್ನೇಹಿತನಂತೆ. ತಿಪ್ಪಾಜೋಯಿಸರಿಗೆ ಎಲ್ಲ ಗೊತ್ತಾಯಿತು. ನಾನೂ ನೋಡುತಿದೇನೆ ಈಗ ನಿಮ್ಮ ರಾಜುವನ್ನು ಬಹಳ ಮುದ್ದಿಸುತಾರೆ. ಅಯ್ಯೊ, ಅಯ್ಯೊ, ನಂಜಮ್ಮನವರಂತೂ ರಾಜುವನ್ನು ಒಂದು ಗಳಿಗೆಯೂ ಬಿಟ್ಟಿರುವುದಿಲ್ಲ. ಆದುದರಿಂದಲೇ ಈಗ ಯಾವುದೊ ಉಪನಯನಕ್ಕೆ, ನಿಂಗನ ಹಳ್ಳಿಗೆ ಅವನನ್ನು ಕರೆದುಕೊಂಡು ಹೋಗಿದಾಳೆ."

"ಸದ್ಯ. ಎಲ್ಲಾದರೂ ಹುಡುಗ ಚೆನ್ನಾಗಿರಲಮ್ಮ. ಅವನ ಮೇಲಾದರೂ ಕರುಣೆ ತೋರುವಂತೆ ದೇವರು ಬುದ್ಧಿ ಕೊಟ್ಟನಲ್ಲ. ನನಗೆ ಸಂತೋಷ" ಎಂದಳು.

"ಅದಿರಲಿ. ನಾನು ಹೇಳುವುದನ್ನು ಪೂರ್ತ ಕೇಳು ಸೀತಮ್ಮ. ಈ ಬೂಟಾಟಿಕೆವೇಷಗಳೆಲ್ಲ ಏಕೆ ಗೊತ್ತೆ? ಇಂದು ನಡೆಯಿತಲ್ಲ, ಆ ಕತೆಗೆ ಅಸ್ತಿಭಾರವಾಗಿ; ಅಷ್ಟೆ. ಈ ಊರಿನಲ್ಲೆಲ್ಲ ಹಬ್ಬಿರುವ ಸುದ್ದಿ ಇದು-ನಿಮ್ಮ ಮಾವ ಶೆಟ್ಟಿಯ ಸಾಲ ತೀರಿಸಲು ಸಾಧ್ಯವಾಗದೆ, ಮಗನಿಗೆ ಬೇರೆ ಮದುವೆ ಮಾಡುವ ಮೂಲಕ ವರದಕ್ಷಿಣೆ ಸಂಪಾದಿಸುವುದರಲ್ಲಿದಾನೆ........"

"ಛೆ! ಅದೆಲ್ಲ ಸುಳ್ಳು, ರಾಧಮ್ಮ. ಐದಾರು ಮಕ್ಕಳ ತಂದೆಗೆ ವರದಕ್ಷಿಣೆ ಕೊಟ್ಟು, ಹೆಣ್ಣು ಕೊಡುವ ತಂದೆ ತಾಯಿಗಳಿರುವರೆ! ಎಲ್ಲ ಬರಿಯ ಸುಳ್ಳು!........"

"ಇಲ್ಲ. ನಿನಗೆ ಗೊತ್ತಿಲ್ಲ, ಸೀತಮ್ಮ. ಹರಲೀಪುರದ ಸಾಹುಕಾರರೊಬ್ಬರ ತಂಗಿಯಂತೆ. ಇಪ್ಪತ್ತು ಮೂರು ವರುಷವಂತೆ. ಮೊದಲ ಮದುವೆ ಹದಿಮೂರನೆ ವಯಸ್ಸಿಗೇ ಆಯಿತಂತೆ. ಆದರೆ ಆಕೆ ಮೈ ನೆರೆಯಲಿಲ್ಲವೆಂದು ಅವಳ ಗಂಡ ಬಿಟ್ಟುಬಿಟ್ಟ. ಅವಳನ್ನು ಸಾವಿರ ರೂಪಾಯಿ ವರದಕ್ಷಿಣೆಯೊಂದಿಗೆ ನಿನ್ನ ಗಂಡನಿಗೆ ಕಟ್ಟುವ ಏರ್ಪಾಡು ನಡೆದಿದೆ. ಇದೆಲ್ಲ ಆ ಸಾಲಕೊಟ್ಟಿರುವ ಶೆಟ್ಟಿಯ ಕೆಲಸ. ಶ್ರೀಕಂಠಪುರಕ್ಕೂ ಹರಲೀಪುರಕ್ಕೂ ಮೂರೇ ಮೈಲಿ. ಆ ಹುಡುಗಿಗೂ, ಆಕೆಯ ಅಣ್ಣನಿಗೂ ಆಗುವುದಿಲ್ಲವಂತೆ; ಪಾಪ ಅದು ತಬ್ಬಲಿ........"

"ಆದರೆ ಅವರು ಈ ಏರ್ಪಾಡಿಗೆ ಎಂದೆಂದಿಗೂ ಒಪ್ಪುವುದಿಲ್ಲ. ರಾಧಮ್ಮ, ಖಂಡಿತವಾಗಿಯೂ ಈ ವಿಷಯ ಆ ಶೆಟ್ಟಿ ಹರಡಿದ ಸುಳ್ಳು ಸುದ್ದಿ. ನನಗೇನೂ ನಂಬಿಕೆಯಿಲ್ಲ. ನೀವೂ ನಂಬಬೇಡಿ. ಶೆಟ್ಟಿಗೆ ನಮ್ಮ ಮಾವನವರನ್ನು ಕಂಡರೆ ಆಗುವುದಿಲ್ಲ. ಏನಾದರೂ ಮಾಡಿ ಇವರ ಮೇಲೆ ಅನೇಕ ಕೇಸುಗಳನ್ನು ಹೇರಬೇಕೆಂಬುದೇ ಆತನ ಆಸೆ. ಪದೇಪದೇ ಕೊಟ್ಟ ಸಾಲಕ್ಕೆ ತಗಾದೆ ಮಾಡುತಾನೆ. ಕೊಡದಿದ್ದರೆ ಮನೆ ಕಿತ್ತುಕೊಂಡು ಬಿಡುತೇನೆ, ಎಂದು ಹೆದರಿಸುತಾನೆ. ಮದುವೆಯ ವಿಷಯ ಹರಡಿದರೆ, ಸೊಸೆಯೂ ಮಾವನ ಮೇಲೆ, ಗಂಡನ ಮೇಲೆ ಕೇಸು ಮಾಡಬಹುದೆಂದು ಊಹಿಸಿ ಈ ಸುಳ್ಳುಸುದ್ದಿ ಹರಡಿದಾನೆ. ದಯವಿಟ್ಟು ನೀವು ಇದನ್ನು ನಂಬಿ ಊರೆಲ್ಲ ಹರಡಬೇಡಿ. ಎಲ್ಲ ಸುಳ್ಳು. ನನ್ನವರ ಗುಣ ನನಗೆ ಗೊತ್ತಿಲ್ಲವೆ. ಅವರೆಂದಿಗೂ ಈ ಏರ್ಪಾಡಿಗೆ ಒಪ್ಪುವುದಿಲ್ಲ... ಹಾಗೆ ನಡೆದುಬಿಟ್ಟರೆ, ಇಷ್ಟು ಮಕ್ಕಳ ತಾಯಿ ನಾನೆಲ್ಲಿ ಹೋಗಬೇಕು? ಆಗ ನಾನು ಯಾರು ಮನೆಯವಳು? ತಂದೆ, ನಿನ್ನನ್ನು ಬೇರೆ ಮನೆಗೆ ಕೊಟ್ಟುದಾಯಿತು; ಈಗ ನೀನು ನಮ್ಮ ಮನೆಯವಳಲ್ಲ; ಈ ಮಕ್ಕಳನ್ನು ಸಾಕಲು ನನಗೇನು ಅಗತ್ಯ? ಎನ್ನುತಾನೆ. ಇವರು, ನಿನ್ನನ್ನು ಮನೆ ಬಿಟ್ಟು ಹೊರಗೆ ಹಾಕಿದೇವೆ, ಎನ್ನುತಾರೆ. ಆಗ ನಾನೆಲ್ಲಿಗೆ ಹೋಗಲಿ? ಈ ಮಕ್ಕಳ ಪಾಡೇನು?........ಇವರನ್ನೆಲ್ಲ ಬಲವಂತದಿಂದ ಅತ್ತೆಮನೆಯಲ್ಲಿ ಬಿಟ್ಟು ಬಿಡಬಹುದು. ಆದರೆ ನನ್ನ ಕರುಳು ತಡೆಯಬೇಕಲ್ಲ. ಖಂಡಿತ, ಹಾಗಾದರೆ ನನ್ನ ಬಾಳು ಉಳಿಯದು. ಈ ಮಕ್ಕಳು ಈ ವಯಸ್ಸಿನಲ್ಲಿಯೇ ಹೊಟ್ಟೆ

ಗಿಲ್ಲದೆ ಮಣ್ಣು ಕಾಣುತಾರೆ........ದೇವರಿಗಷ್ಟು ಬುದ್ಧಿಯಿಲ್ಲವೆ? ನಿಜವಾಗಿಯೂ ಹಾಗಾಗುವುದಿಲ್ಲ. ಎಲ್ಲ ಬರಿಯ ಸುಳ್ಳು. ನೀವು ನಂಬಬೇಡಿ" ಎಂದಳು.

ಹನುಮಣ್ಣ "ಅಲ್ಲದೆ ಮತ್ತೇನು, ತಾಯಿ? ಜನ ಸುಮ್ಮನೆ ಬಿಟ್ಟಾರೆ, ಹಾಗೆಲ್ಲ ಮಾಡಿದರೆ? ಮದುವೆ ಎನ್ನುವುದೇನು ಮಾವಿನಹಣ್ಣು ತಿಂದಹಾಗೇನು; ಒಂದಾದ ಮೇಲೊಂದು ಹೀರಿ ಓಟೆ ಬಿಸಾಡುವುದಕ್ಕೆ? ಸರ್ಕಾರ ಸುಮ್ಮನಿರುತದೆಯೆ? ಕೋರ್ಟಿಲ್ಲವೆ? ಮನಸ್ಸು ಬಂದಾಗಲೆಲ್ಲ ಮದುವೆ ಮಾಡಿಕೊಳ್ಳಲು ದಾರಿ ಕೊಟ್ಟರೆ, ಅದೂ ಒಂದು ವ್ಯಾಪಾರ ಆಗಿಬಿಡುತದೆ. ವರದಕ್ಷಿಣೆ ತೋರಿಸುತ ಪೆದ್ದು ಪೆದ್ದು ಹೆಣ್ಣು ತರುತಾರೆ. ಇವರು ಆನಂದದಿಂದ ದುಡ್ಡು ತೆಗೆದುಕೊಂಡು, ಮದುವೆ ಮಾಡಿಕೊಳ್ಳುತಾರೆ. ಮೂರು ದಿನ ಕಳೆಯುವುದೇ ತಡ, ವರದಕ್ಷಿಣೆಯೊಡನೆ ಬರುವ ಇನ್ನೊಂದು ಹೆಣ್ಣಿಗೆ ಒಲಿದು, ಈ ಹೆಂಡತಿಯನ್ನು ಬೀದಿಗೆ ದೂಡಿಬಿಡುತಾರೆ. ಜನ ಇದಕ್ಕೆ ಅವಕಾಶ ಕೊಟ್ಟರೆ, ಒಂದೇ ತಿಂಗಳೊಳಗೆ ನಿಮ್ಮ ಜನರ ಒಂದು ಗಂಡು ಲಕ್ಷಾಂತರ ರೂಪಾಯಿ ದುಡಿದುಬಿಡಬಹುದು. ಏನು ಕೆಟ್ಟ ಜಾತಿ ತಾಯಿ, ನಿಮ್ಮದು. ಆದುದರಿಂದಲೇ ನಮ್ಮಲ್ಲಿ ವರದಕ್ಷಿಣೆಯ ಪದ್ಧತಿಯೇ ಇಲ್ಲ. ಗಂಡು ಅಂಗಲಾಚಿ ಬೇಡಿ, ತೆರ ಕೊಟ್ಟು, ಹೆಣ್ಣು ಪಡೆಯಬೇಕು. ಹೆಣ್ಣು ಜಗತ್ತಿನ ಜನರಲ್ಲಿ ಅರ್ಧಭಾಗ ಅಲ್ಲವೆ, ತಾಯಿ? ಅದೆಲ್ಲ ನಿಮ್ಮ ಜನವೇ ಹೇಳುತಾರೆ! 'ಆಚಾರ ಹೇಳುವುದು; ಬದನೆಕಾಯಿ ತಿನ್ನುವುದು' ಎಂದಹಾಗೆ. ಇದು ಬಹಳ ಕೆಟ್ಟ ಪದ್ಧತಿ, ತಾಯಿ .... ...... ಎಲ್ಲ ಸುಳ್ಳು ಸಮಾಚಾರ. ಆ ಶೆಟ್ಟಿಯ ಕೆಲಸವೇ ಇದು" ಎಂದು ಸೀತಮ್ಮನ ನಿರ್ಧಾರಕ್ಕೆ ಬೆಂಬಲ ಕೊಟ್ಟ.

ಆಗಲೇ ರಾತ್ರಿ ಹನ್ನೊಂದು ಗಂಟೆಯಾಗಿತ್ತು. "ಗಾಡಿಯಲ್ಲಿ ಬಂದು ಬಹಳ ಆಯಾಸವಾಗಿದೆ. ಇನ್ನು ಮಲಗಿಕೊಳ್ಳಿ, ನಾಳೆ, ಮಧ್ಯಾಹ್ನದ ಮೇಲೆ ಊಟಮಾಡಿಕೊಂಡು, ಮಲ್ಲಿಗೆಹಳ್ಳಿಗೆ ಹೊರಟರಾಯಿತು" ರಾಧಮ್ಮನವರು ಹೊದ್ದಿಕೆ ಹೊದ್ದುಕೊಳ್ಳುತ್ತ ಹೇಳಿದರು. ಹನುಮಣ್ಣ ಹೋಗಿ ಮಲಗಿಕೊಂಡ. ಎಲ್ಲರಿಗೂ ಬೇಗ ನಿದ್ದೆ ಬಂದುಬಿಟ್ಟಿತು. ಸೀತಮ್ಮನಿಗೂ ಚಿಂತೆಗಿಂತ ಆಯಾಸವೇ ಬಲವಾಗಿ ತೋರಿತು. ಬೇಗ

ನಿದ್ದೆ ಬಂತು. ಅಡುಗೆಯವನು ಇನ್ನೂ ಏನೇನೋ ಕೆಲಸ ಮಾಡಿಕೊಳ್ಳುತ್ತಿದ್ದ.

ಬೆಳಕು ಹರಿಯಿತು. ರಾಧಮ್ಮನವರು ಆಗಲೆ ಎದ್ದು ಮಗು ಬಾಣಂತಿಗೆ ಎಣ್ಣೆನೀರು ಹಾಕುವ ಸಿದ್ಧತೆ ಮಾಡಿದ್ದರು. ಕೃಷ್ಣಪ್ಪ ತುಂಬ ತುಪ್ಪ ಹಾಕಿ ಸಿಹಿಸಜ್ಜಿಗೆ, ಕಾಫಿ ಮಾಡುತ್ತಿದ್ದ. ಮಗು ಬಾಣಂತಿಯ ನೀರು ಮುಗಿಯಿತು. ಮಕ್ಕಳ ಸ್ನಾನವೂ ಆಯಿತು. ಎಲ್ಲರೂ ತಿಂಡಿ ಕಾಫಿ ತೆಗೆದುಕೊಂಡರು. ಹನುಮಣ್ಣ ಎತ್ತಿಗೆ ಮೈ ತೊಳೆಯಲು ಹಳ್ಳಕ್ಕೆ ಹೋದ. ನೀರು ಚೆನ್ನಾಗಿದ್ದುದರಿಂದ ತಾನೂ ಅಲ್ಲಿಯೆ ಸ್ನಾನ ಮಾಡಿಕೊಂಡು ಎತ್ತುಗಳೊಂದಿಗೆ ಬರುವಷ್ಟರಲ್ಲಿ ಅಡುಗೆ ಆಗಿಬಿಟ್ಟಿತ್ತು. ಸೀತಮ್ಮ ಊರಿಗೆ ಹೊರಡಲು ಎಲ್ಲ ಸಿದ್ಧತೆಗಳನ್ನೂ ಮಾಡಿಕೊಂಡು ಮಕ್ಕಳೊಂದಿಗೆ ಊಟಕ್ಕೆ ಕುಳಿತಿದ್ದಳು. ರಾಧಮ್ಮನವರು ಬಿಸಿಬೇಳೆಹುಳಿಯನ್ನ, ಕೆನೆ ಮೊಸರನ್ನ, ತೊವ್ವೆ, ಪಾಯಸ ಮಾಡಿಸಿದ್ದರು. ಹನುಮಣ್ಣನ ಊಟವೂ ಮುಗಿಯಿತು. ಗಂಟೆ ಒಂದೂವರೆಯಾಗಿತ್ತು. ಸೀತಮ್ಮ ಶಾರದಮ್ಮನವರ ಮನೆಗೆ ಹೋಗಿ ಹೇಳಿಬಿಟ್ಟು ಬರುವದರೊಳಗಾಗಿ ರಾಧಮ್ಮನವರು ಹನುಮಣ್ಣನ ಎರಡು ಪಾತ್ರೆಗಳ ತುಂಬ ಹುಳಿಯನ್ನ, ಮೊಸರನ್ನ ತುಂಬಿಟ್ಟಿದ್ದರು.

ಸೀತಮ್ಮ "ಇದೆಲ್ಲಾ ಏಕೆ; ಬೇಡ ರಾಧಮ್ಮ. ಈಗ ಅಜೀರ್ಣ ಆಗುವಷ್ಟು ತಿಂದುಬಿಟ್ಟಿದೇವೆ. ಇನ್ನೇಕೆ? ಹುಡುಗರಿಗೆ ಹಸಿವಾದರೆ ನಿನ್ನೆ ಕಟ್ಟಿಕೊಂಡು ಬಂದ ಕೆಲವು ರೊಟ್ಟಿಗಳಿವೆ. ಒಂದೆರಡು ಬಾಳೆಯ ಹಣ್ಣಿದೆ. ಜೊತೆಗೆ ಇದೇಕೆ?" ಎಂದು ಬಹಳ ಹೇಳಿದಳು. ಆದರೆ ರಾಧಮ್ಮನವರು ಕೇಳಬೇಕಲ್ಲ. "ಏನಾದರೂ ಅನನುಕೂಲದಿಂದ ರಾತ್ರಿ ಗುಡ್ಡದಪುರದಲ್ಲಿ ಇಳಿದುಕೊಳ್ಳಬೇಕಾದರೆ ಅಲ್ಲಿ ಏನು ಮಾಡುತೀರಿ? ಪ್ರಯಾಣ ಮಾಡುವವರು ಯಾವಾಗಲೂ, ಏನನ್ನಾದರೂ ತಿನ್ನುವುದಕ್ಕೆ ತೆಗೆದುಕೊಂಡೇ ಹೊರಡಬೇಕು. ದಾರಿಯಲ್ಲಿ ಏನೊ, ಯಾರಿಗೆ ಗೊತ್ತು? ಮಕ್ಕಳಿಗೆ ತುಂಬ ಹಸಿವೆಯಾಗಬಹುದು. ಇರಲಿ, ಇದ್ದರೆ ಏನು ಕಷ್ಟ?" ಎಂದು ಬಲವಂತಮಾಡಿ ಕೃಷ್ಣಪ್ಪನಿಂದ ಎಲ್ಲವನ್ನೂ ಗಾಡಿಯಲ್ಲಿ ಸರಿಯಾಗಿರಿಸಿದರು. ಸಾಮಾನನ್ನು ಗಾಡಿಗೆ ಹಾಕಿದುದಾಯಿತು. ಸೀತಮ್ಮ

"ಸರೋಜಮ್ಮ, ಪದ್ಮಕ್ಕ, ರಾಜೀಬಾಯಿ ಎಲ್ಲರಿಗೂ ನನ್ನ ನಮಸ್ಕಾರ ಗಳನ್ನು ತಿಳಿಸಿ, ರಾಧಮ್ಮ. ನನ್ನನ್ನು ಮರೆಯಬಾರದೆಂದು ಕೇಳಿಕೊಂಡ ಳೆಂದು ಹೇಳಿ. ನಿಮ್ಮ ಋಣವನ್ನು ನಾನು ಎಂದೆಂದಿಗೂ ತೀರಿಸಲಾರೆ. ನನಗೆ ಬಹಳ ಸಹಾಯ ಮಾಡಿದೀರಿ. ನಾನು ಹೋಗಿ ಬರುತೇನೆ. ದಯೆ ಯಿರಲಿ, ನೆನಪಿರಲಿ. ಮೂರು ತಿಂಗಳಾದ ಕೂಡಲೆ ಬರುತೇನೆ" ಎನ್ನುತ್ತಾ ಮಕ್ಕಳೊಡನೆ ಗಾಡಿ ಹತ್ತಿದಳು. ರಾಧಮ್ಮನವರ ಕಣ್ಣುಗಳಲ್ಲಿ ನೀರು ನಿಂತಿತ್ತು. ಗಾಡಿ ಹೊರಟಿತು.

ಮಲ್ಲಿಗೆಹಳ್ಳಿಯ ದಾರಿ ಹನುಮಣ್ಣನಿಗೂ ತಿಳಿದಿರಲಿಲ್ಲ; ಸೀತಮ್ಮ ನಿಗೂ ಗೊತ್ತಿರಲಿಲ್ಲ. ಪೂರ್ವದ ರಸ್ತೆಯಲ್ಲಿ ಹೋಗಬೇಕೆಂಬುದು ಮಾತ್ರ ಗೊತ್ತು. ಆ ಹಾದಿಯಲ್ಲಿ ಒಂದು ಮೈಲಿ ಹೋದರು. ಹಸಿರುಹುಲ್ಲು ಹೊತ್ತ ಹೆಂಗಸೊಬ್ಬಳು ಎದುರಿಗೆ ಬರುತ್ತಿದ್ದಳು. ಹನುಮಣ್ಣ "ಮಲ್ಲಿಗೆ ಹಳ್ಳಿಗೆ ಈ ರಸ್ತೆ ಹೋಗುತದೆಯೆ?" ಎಂದು ಕೇಳಿದ. ಆಕೆ ಸ್ವಲ್ಪ ಹೊತ್ತು ಸುಮ್ಮನೆ ನೆಲವನ್ನೇ ನೋಡುತ್ತ ನಿಂತು, ತಕ್ಷಣವೆ "ಹ್ದೂಕಣಪ್ಪ, ಇದೇ ಹಾದಿ. ಆದರೆ ಬಹಳ ದೂರ. ಹೊಳೆ ದಾಟಬೇಕು; ಗುಡ್ಡದ ಪುರದ ಹೊಳೆ" ಎಂದು ಮುಂದೆ ಹೊರಟಳು.

"ರಸ್ತೆ ಸಿಕ್ಕಿತಲ್ಲ. ಎಷ್ಟು ದೂರವಾದರೇನು. ಇನ್ನು ಹೊರಡೋಣ" ಎಂದುಕೊಂಡು ಎತ್ತಿನ ಬೆನ್ನು ಮುಟ್ಟಿದ. ಗಾಡಿ ಓಡಿತು.

ಹಾದಿ ಸ್ವಲ್ಪವೂ ಚೆನ್ನಾಗಿಲ್ಲ. ಹಿಂದಿನ ದಿನ ಆ ಕಡೆಯೆಲ್ಲ ಮಳೆ ಯಾಗಿತ್ತು. ಗಾಡಿಗಳು ಓಡಾಡಿದ್ದುದರಿಂದ ರಸ್ತೆ ತುಂಬ ಕೆಸರಾಗಿತ್ತು. ಕೆಸರುಕೆಮ್ಮಣ್ಣಿನೊಳಗೆ ಒಂದರ ಪಕ್ಕದಲ್ಲೊಂದು ಗಾಡಿಯ ಚಕ್ರದ ಗುರುತುಗಳು ಹಾಸಿ ನಡೆದಿದ್ದುವು. ಅಲ್ಲೊಂದು ಇಲ್ಲೊಂದು ಸಣ್ಣ ಸಣ್ಣ ಮರಗಳು ಹಾದಿಗೆ ನೆರಳು ಕೊಟ್ಟಿದ್ದುವು. ಸುತ್ತ ಗಿಡಗಳೇ ಇಲ್ಲ. ಬರಿಯ ಗುಡ್ಡಗಳು. ಎಡಭಾಗದ ಗುಡ್ಡದ ಹಿಂದೆ ರಸ್ತೆ ಹೋಗಿ ಮಾಯವಾಗು ತ್ತಿದೆ. ಗಾಡಿ, ಈ ಏರಿಯನ್ನೇರಿ ಅಲ್ಲಿಗೆ ಹೋದರೆ ಬಲಭಾಗದಲ್ಲೊಂದು ಗುಡ್ಡ ಕಾಣಿಸುತ್ತದೆ. ಈ ರಸ್ತೆ ಅದರ ಹಿಂದೆ ಹೋಗುತ್ತಿದೆ; ಸುತ್ತಿ ಸುತ್ತಿ ಸರಿಯುತ್ತಿದೆ. ನಾಲ್ಕು ಅಡಿ ಅಗಲವೂ ಇಲ್ಲ. ಹೇಗೆ ಗಾಡಿಗಳು ತಿರುಗಾಡುವುವೊ! ಹನುಮಣ್ಣನಿಗೆ, ಒಡ್ಡರ ಬಂಡಿಗಳ ಹೊರತು ಬೇರೆ

ಹೋಗಲಾರವೆಂದೆನ್ನಿಸಿತು. ಗಾಡಿಯನ್ನು ನಿಧಾನವಾಗಿ ಬಿಡುತ್ತಿದ್ದ. ಕೆಂಪು ರಸ್ತೆ ಹೋಗಿ ಬಿಳಿಯ ಮಣ್ಣಿನ ರಸ್ತೆಯಾಯಿತು ; ಸ್ವಲ್ಪ ಹೊತ್ತಿನಲ್ಲಿಯೇ ಕಪ್ಪು ಮಣ್ಣಿನ ರಸ್ತೆ.

ಈ ನಿರ್ಜನ ಪ್ರದೇಶದಲ್ಲಿ ನಿಷ್ಕಾಮಿಗಳಾಗಿ ಅಲ್ಲಲ್ಲಿ ನಿಂತಿರುವ ಗಿಡಗಳು ಶೂನ್ಯವಾಗಿಲ್ಲ. ಕಣ್ಸೆಳೆವ ಬಣ್ಣಬಣ್ಣದ ಹೂಗಳಿಂದ ತುಂಬಿವೆ ದಾರಿಯಲ್ಲಿ ಕೈಗೆ ಸಿಕ್ಕುವಂತೆ ಒಂದು ಹೂಗೊಂಚಲು ಜೋತಾಡುತ್ತಿತ್ತು ; ಹನುಮಣ್ಣ, ಕೇಳುವುದನ್ನೇ ನೋಡುತ್ತ ಆನಂದ ಪಡುತ್ತಿದ್ದ ಶಾರದೆಗೆ ಅದನ್ನು ಕೊಟ್ಟ. ಕೆಸರು ಬಹಳ ಇರುವ ಕಡೆ ಗಾಡಿ ತುಟಿಪಿಟಕ್ಕೆನ್ನದೆ ಶಾಂತವಾಗಿ ಸಾಗುತ್ತಿತ್ತು ; ಕಲ್ಲು ಸಿಕ್ಕರೆ ಗಡಿಬಿಡಿ, ಗಲಾಟೆ. ಆಗಾಗ ಬಣ್ಣ ಬಣ್ಣದ ಹಕ್ಕಿಗಳು ' ಚೀ 'ಗುಟ್ಟಿ ಗಾಡಿಗೆ ಅಡ್ಡಲಾಗಿ ಹಾರಾಡುತ್ತಿದ್ದುವು. ಇನ್ನೊಂದು ಹಕ್ಕಿ ಗಿಡದ ಮೇಲೆ " ಕೂಹೂ, ಕೂಹೂ " ಎಂದು ಕೂಗುತ್ತಿತ್ತು. ಶಾರದ " ಅದು ಯಾವ ಹಕ್ಕಿಯಮ್ಮ ? " ಎಂದು ಕೇಳಿದಳು. ಸೀತಮ್ಮ " ಅದು ಕೋಗಿಲೆ. ಆ ಹಕ್ಕಿ, ತನ್ನ ತಾಯಿಗೆ ' ಚಿಕ್ಕವ್ವಾ, ಚಿಕ್ಕವ್ವಾ ' ಎನ್ನುತ್ತಿತ್ತಂತೆ. ಈ ಹೂಗಳ ಕಾಲ ಬಂದಾಗ ಈ ಹಕ್ಕಿ ಇನ್ನೂ ಮರಿಯಂತೆ. ಇದರ ತಾಯಿ ಒಳ್ಳೊಳ್ಳೆಯ ಹೂಗಳನ್ನು ತಂದು ಗೂಡೊಳಗೆ ಶೇಖರಿಸುತ್ತಿತ್ತಂತೆ. ಆದರೆ ಮಾರನೆಯ ದಿನ ನೋಡುವಾಗ ಆ ಹೂ ಬತ್ತಿ ಬಹಳ ಕಡಮೆಯಾಗಿಬಿಡುತಿತ್ತು. ಈ ಗುಟ್ಟು ಆ ಹಕ್ಕಿಗೆ ತಿಳಿಯಲಿಲ್ಲ. ಯಾರೋ ಸ್ವಲ್ಪಸ್ವಲ್ಪ ತೆಗೆದುಕೊಂಡುಬಿಡುತಾರೆ, ಎಂದು ತಿಳಿದು ಆ ಸ್ಥಳವನ್ನೇ ಬಿಟ್ಟು ಓಡಿಹೋಯಿತಂತೆ. ರೆಕ್ಕೆ ಬಂದ ಮರಿಗಳನ್ನು ಮರೆಯುವುದು ತಾಯಿ ಹಕ್ಕಿಯ ಸ್ವಭಾವ. ಈ ಮರಿ ಹಕ್ಕಿ ಆ ತನ್ನ ತಾಯಿಯನ್ನು ಹುಡುಕಿಕೊಂಡು ,' ಚಿಕ್ಕವ್ವಾಚಿಕ್ಕವ್ವಾ, ಎನ್ನುತ ಅಲೆಯುತಿದೆ. ನಮಗೆ ' ಕೂಹೂ ಕೂಹೂ ' ಎಂತ ಕೇಳುತಿದೆ" ಎಂದು ಕತೆ ಹೇಳಿದಳು, ಶಾರದ ಕಿವಿಗೊಟ್ಟು " ಇಲ್ಲಮ್ಮ, ' ಚಿಕ್ಕವ್ವಾ ! ಚಿಕ್ಕವ್ವಾ ! ' ಎಂದ ಹಾಗೆಯೇ ಕೇಳಿಸುತಿದೆ '' ಎಂದಳು.

ಮೋಡ ಕವಿಯುತ್ತಿದ್ದರೂ ರವಿ ನುಣುಚಿಕೊಂಡು ಬಿಸಿಲು ಬೀರುತ್ತಿದ್ದ. ಐದು ಗಂಟೆಯಾಗಿತ್ತು. ದೂರದಲ್ಲೊಂದು ಕೆರೆ ಕಾಣಿಸಿತು. ಲಲಿತ " ಅಮ್ಮ, ಅಲ್ಲಿ ರೊಟ್ಟಿ ತಿಂದುಬಿಡೋಣ. ಅದು ಆಗಲೇ

ಒಣಗಿ ಹೋಗಿದೆ” ಎಂದಳು. ಶಾರದ “ಹೌದು ಕಣಮ್ಮ” ಎಂದು ಹಿಮ್ಮೇಳ ಕೊಟ್ಟಳು. ಕೆರೆಯ ಹತ್ತಿರ ಗಾಡಿ ನಿಂತಿತ್ತು. ನೀರು ಚೆನ್ನಾಗಿತ್ತು. ರಾಧಮ್ಮನವರು ಮೊಸರನ್ನದ ಜೊತೆಯಲ್ಲಿಟ್ಟಿದ್ದ ಉಪ್ಪಿನಕಾಯಿಯೊಂದಿಗೆ ಎಲ್ಲರೂ ಒಂದೊಂದು ರೊಟ್ಟಿ, ಹಣ್ಣು ತಿಂದು ನೀರು ಕುಡಿದರು. ಗಾಡಿ ಮುಂದೆ ಹೊರಟಿತು.

ದಾರಿಯಲ್ಲಿ ಕೊರಚರ ಗುಂಪೊಂದು ಬಂತು. ಗಂಡಸು ತಲೆಯ ಮೇಲೊಂದು ದೊಡ್ಡ ದುಂಡು ಚಾಪೆಯನ್ನಿಟ್ಟು ಅದರ ಮೇಲೆ ಏನೇನೋ ಹೇರಿಕೊಂಡಿದ್ದಾನೆ. ಒಂದು ಕೋಳಿಗೆ ಕಾಲು ಕಟ್ಟಿ ಚಾಪೆಯ ಒಂದಂಚಿನಲ್ಲಿ ಮಲಗಿಸಿದ್ದಾನೆ. ಬಟ್ಟೆಯೊಳಗೊಂದು ಮಗುವನ್ನಿಟ್ಟು ಅದನ್ನು ಸೊಂಟಕ್ಕೆ ಕಟ್ಟಿಕೊಂಡಿದ್ದಾನೆ. ಕೌಪೀನದ ಹೊರತು ಬೇರೆ ಉಡುಗೆ ಆ ಗಂಡಸಿಗಿಲ್ಲ. ತಲೆಯಮೇಲೆ ಹರುಕು ಗಮುಟಿನ ರುಮಾಲು ಮಾತ್ರ ಕುಳಿತಿದೆ. ಎಡಗಾಲಿಗೊಂದು ದೊಡ್ಡ ಬಳೆ ಹಾಕಿದ್ದಾನೆ. ಮುಂದೊಂದು ಗಿಡ್ಡ ಹೋರಿ ಬಿಟ್ಟುಕೊಂಡು ನಡೆಯುತ್ತಿದಾನೆ. ಅದರ ಮೇಲೆ ಏನೇನೋ ಹೊರೆ; ಬಲೆ, ಬುಟ್ಟಿ, ಛತ್ರಿ ಎಲ್ಲ ಅಲ್ಲಿಯೆ; ಅವುಗಳ ಮೇಲೊಂದು ಮಗುವೂ ಕುಳಿತಿದೆ. ಹೋರಿ ನಿಧಾನವಾಗಿ ನಡೆಯುತ್ತಿದೆ. ಸಂಸಾರ ಹಾದಿಯ ಎಡಭಾಗದಲ್ಲಿ ಸಾಲಾಗಿ ಬರುತ್ತಿದೆ. ಗಂಡಸಿನ ಹಿಂದೆ ಹೆಂಗಸೊಬ್ಬಳಿದ್ದಾಳೆ. ಆಕೆ, ಹಿಂದೊಂದು ಮಗುವನ್ನೂ, ಸೊಂಟದ ಮೇಲೊಂದು ಮಗುವನ್ನೂ ಬಿಗಿದುಕೊಂಡಿದ್ದಾಳೆ. ಮೊಳಕಾಲ ಮೇಲಿದ್ದ ಹರುಕು ಸೀರೆ ಎಂದು ನೀರು ಕಂಡಿತ್ತೊ! ಕುಪ್ಪಸ ಬಿಗಿದುಕೊಂಡಿದ್ದಾಳೆ. ಕೊರಳೊಳಗೆ ಯಾವದೊ ಮಣಿಯ ಸರ ಜೋತುಬಿದ್ದಿದೆ. ಕಿವಿಯೊಳಗೆ ದೊಡ್ಡದೊಂದು ವಿಚಿತ್ರ ಓಲೆ; ಅದಕ್ಕವರು ಏನನ್ನುತ್ತಾರೊ! ಸ್ವಲ್ಪವೂ ಆಯಾಸವಿಲ್ಲದಂತೆ ಗಂಡಸಿನ ಹಾಗೆ ಅವಳೂ ನಡೆಯುತ್ತಿದ್ದಾಳೆ. ಸಾಲದುದಕ್ಕೆ ತಲೆಯ ಮೇಲೊಂದು ದೊಡ್ಡ ಗಂಟು. ಅವಳ ಹಿಂದೆ ಅವಳ ಮಗಳೊ ಏನೊ; ಒಬ್ಬ ಹರೆಯದ ಹುಡುಗಿ ಹೋಗುತ್ತಿದ್ದಾಳೆ. ಉಡುಪು, ಒಡವೆ ತಾಯಿಯಂತೆಯೆ. ತಾಯಿ, ಮಗಳಿಗೆ ಹೊಸದಾಗಿ ಮೂಗು ಚುಚ್ಚಿದಪ್ಪ ದಾರ ಬಿಗಿದುಬಿಟ್ಟಿದ್ದಾಳೆ. ಕರಿಯ ಗುಂಗುರು ಕೂದಲು ಗಾಳಿಗೆ ಹಾರಾಡುತ್ತಿದೆ. ಯೌವನ ಕಂಡವಳು; ಉಬ್ಬಿದ ಎದೆ. ಕೈ ಬೀಸಿ

ನಡೆಯುತ್ತಿದ್ದಾಳೆ. ಆದರೆ ತಲೆಯಮೇಲೊಂದು ಸಾಮಾನು ತುಂಬಿದ ಚೌಕುಬುಟ್ಟಿ.

ಸೀತಮ್ಮ ಈ ಸಂಸಾರ ಹಾದು ಹೋದುದನ್ನು ನೋಡಿದಳು. "ಹನುಮಣ್ಣ, ಇವರ ಸಂಸಾರ ನೋಡಿದೆಯ, ಹೇಗಿದೆ! ಸಂಸಾರ ಎಂದರೆ ಹೀಗಿರಬೇಕು. ಇವರಿಗೆ ಮನೆಯಿಲ್ಲ, ಮಠವಿಲ್ಲ. ಹೊಟ್ಟೆ ಪಾಡಿಗಾಗಿ ಹೊಸಹೊಸ ಜಾಗ ಹುಡುಕುತಾರೆ. ಎಲ್ಲಿ ಅನುಕೂಲವಾದರೆ ಅಲ್ಲಿ ಬಿಡಾರ. ಅವರು ಮರದ ಕೆಳಗೇ ಯಾವಾಗಲೂ ಇಳಿದುಕೊಳ್ಳುತಾರಲ್ಲವೆ ? ನಾನು ನೋಡಿದೇನೆ. ಬಹಳ ಚೆನ್ನಾಗಿರುತದೆ. ಒಬ್ಬೊಬ್ಬರು ಒಂದೊಂದು ಕೆಲಸ ಮಾಡುತಾರೆ. ಒಬ್ಬರಿಗೊಬ್ಬರ ಸಹಾಯ. ಯಾರೂ ಹೆಚ್ಚಲ್ಲ. ಯಾರೂ ಯಜಮಾನರಲ್ಲ. ನೋಡು, ಹೇಗೆ ಎಲ್ಲ ಸಾಮಾನುಗಳನ್ನು ಹೊತ್ತುಕೊಂಡು ಮಕ್ಕಳೊಡನೆ ಎಲ್ಲಿಗೊ ಹೋಗುತಿದಾರೆ. ಅವರಲ್ಲಿ ಈ ಅತ್ತೆಸೊಸೆಯ ಜಗಳ, ಮಾರಾಮಾರಿ ಎಲ್ಲ ಇಲ್ಲವೊ, ಏನೊ ! ಇದ್ದಿದ್ದರೆ ಸಂಸಾರ ಹೀಗೆ ಒಂದಾಗಿರಲು ಸಾಧ್ಯವೆ ? ಎಲ್ಲ ಹೊಂದಿಕೊಂಡು ಜೀವನ ಮಾಡುತಾರೆ. ಈ ಸಂಸಾರ ಕಾಸಿಲ್ಲದ ಭಿಕಾರಿಯಾದರೂ ನೋಡುವವರಿಗೆಷ್ಟು ಆನಂದ ವನ್ನುಂಟುಮಾಡುತದೆ!....ನನಗಿನ್ನೊಂದು ಜ್ಞಾಪಕ ಬಂತು, ಹನುಮಣ್ಣ. ರಾಧಮ್ಮನವರು ಹೇಳಿದ ವಿಷಯಕ್ಕೆ ನಾನು ನಿನ್ನೆ ರಾತ್ರಿ ಅಂದುದು ಸರಿಯಲ್ಲವೆ ? ಇಷ್ಟು ದಿನಗಳ ಮೇಲೆ ಎಂದಾದರೂ ಎರಡನೆಯ ಮದುವೆ ನಡೆಯುತದೆಯೇ ? " ಎಂದಳು.

ಹನುಮಣ್ಣ " ಮದುವೆ ಮಾಡಿಕೊಂಡ ಹೆಂಡತಿಯನ್ನು ಬಿಟ್ಟು ಬೇರೆ ಬೇರೆ ಮದುವೆ ಮಾಡಿಕೊಳ್ಳುವುದೇನು ಗೊಂಬೆಯಾಟವೆ ? ಎಲ್ಲಿಯಾದರೂ ಉಂಟೆ, ತಾಯಿ. ನೀವು ಹೇಳಿದ್ದು ಸರಿ '' ಎಂದ.

ದೂರದಲ್ಲಿ ಯಾವುದೋ ಊರು ಕಾಣುತ್ತಿತ್ತು. ಗಾಡಿ ಬೇಗ ಮುಂದೆ ಸಾಗಿತು. ಗಂಟೆ ಏಳರ ಮೇಲಾಗಿತ್ತು. ಬಲು ಮೋಡ ಕವಿದಿತ್ತು. ಮಳೆ ಬಂದೇಬಿಟ್ಟಿತು. ಬಹಳ ದೊಡ್ಡ ಮಳೆ. ಗಾಡಿಯೊಳಗೆಲ್ಲ ನೀರು ತೂರಿತು. ಹುಣಸೆಯ ಮರದಡಿಯಲ್ಲಿ ಗಾಡಿ ನಿಲ್ಲಲೇಬೇಕಾಯಿತು. ಒಂದೆರಡು ಗುಡುಗು ಮಿಂಚು ಬಂದುವು. ಸಿಡಿಲಿನ ಹೆದರಿಕೆಯಿಂದ ಮರದ ಕೆಳಗೆ ಗಾಡಿ ಬಿಡುವುದು ಅಪಾಯವೆನ್ನಿಸಿತು. ಮುಂದೆ ಹೊಡೆದ.

ಸ್ವಲ್ಪ ದೂರ ಹೋಗುವುದರೊಳಗಾಗಿ ಮಳೆ ಕಡಮೆಯಾಯಿತು. ಗಾಡಿ ಬೇಗಬೇಗ ಹೋಗುತ್ತಿತ್ತು. ಎದುರಿಗೆ, ದೂರದಲ್ಲಿ ಛತ್ರಿ ಹಿಡಿದು, ಯಾರೊ ಬರುತ್ತಿದ್ದರು. ಅವರು ಹತ್ತಿರ ಬಂದ ಕೂಡಲೆ "ಗುಡ್ಡದಪುರ ಇನ್ನೂ ಎಷ್ಟು ದೂರದಲ್ಲಿದೆ ?" ಎಂದು ಹನುಮಣ್ಣ ಕೇಳಿದ. ಆತ "ಅದೊ, ಅಲ್ಲಿ ಕಾಣುವುದೇ" ಎಂದ.

ಗಾಡಿ ಊರು ಸೇರಿತು. ಹತ್ತಿರದಲ್ಲಿಯೆ ಒಂದು ಮನೆ. ಮನೆಯ ಕಟ್ಟೆಯ ಮೇಲೆ ಯಾರೊ ಬೆಚ್ಚಗೆ ಹೊದ್ದುಕೊಂಡು ಕುಳಿತಿದ್ದರು. ಮಳೆ ಇನ್ನೂ ಹನಿಯುತ್ತಿತ್ತು. ಮನೆಯೊಳಗೆ ದೀಪ ಮಿನುಗುತ್ತಿತ್ತು. ಹೊರಗೆ ಕಗ್ಗತ್ತಲೆ. ಒಂದು ಮಿಂಚು ಮಿಂಚಿತು.

ಸೀತಮ್ಮ ಗಾಡಿಯಿಂದ ಬಗ್ಗಿ ನೋಡುತ್ತಿದ್ದಳು. ಮಿಂಚಿನ ಬೆಳಕಿನಲ್ಲಿ ಕಟ್ಟೆಯಮೇಲೆ ಕುಳಿತಿರುವುದು ಮುದುಕಿ ಎಂದು ಗೊತ್ತಾಯಿತು. ಹನುಮಣ್ಣ ಇಳಿದು ಕಟ್ಟೆಯ ಹತ್ತಿರ ಹೋಗಿ "ತಾಯೀ, ಇದು ಶಾನುಭೋಗರ ಮನೆಯೇ ?" ಎಂದು ಕೇಳಿದ. ಮುದುಕಿ "ಅಲ್ಲಪ್ಪ. ಶಾನುಭೋಗರು ಈ ಊರಲ್ಲಿಲ್ಲ. ಅವರು ಒಂದು ತಿಂಗಳ ಹಿಂದೆಯೆ ಈ ಊರು ಬಿಟ್ಟು ಚೆನ್ನಾಪುರದಲ್ಲಿ ವಾಸಮಾಡುತಿದಾರೆ. ಇದು ಗೌಡ ರಾಮಜ್ಜನ ಮನೆ ಯಾವೂರಪ್ಪಾ ? ಯಾರು ಬಂದಿರುವವರು ? ಎಂದು ಕುಳಿತೇ ಕೇಳಿದಳು.

ಹನುಮಣ್ಣ "ನಾವು ಮಲ್ಲಿಗೆಹಳ್ಳಿಗೆ ಹೋಗಬೇಕು. ಗಾಡಿಯೊಳಗೆ ನಮ್ಮ ದಣಿಗಳ ಮಗಳಿದಾರೆ ; ಸಣ್ಣ ಸಣ್ಣ ಮಕ್ಕಳಿದಾರೆ. ಆಕೆ ಬಾಣಂತಿ. ಇಲ್ಲಿ ಹೊಳೆ ದಾಟಬೇಕಂತೆ. ಹೊಳೆ ತುಂಬಿದೆಯೊ ಏನೊ. ಈಗ ದಾಟುವುದಕ್ಕಾಗುತದೆಯೊ, ಇಲ್ಲವೊ. ಮಳೆ ಬರುತಿದೆ. ಗುಡುಗು-ಮಿಂಚು, ಕಗ್ಗತ್ತಲು. ಶಾನುಭೋಗರ ಮನೆ ಈಚೆದಡದ ಮೇಲೆಯೇ ಇದೆಯಂತೆ, ಎಂದು ನಮ್ಮ ಸೀತಮ್ಮ ಹೇಳಿದರು. ಆದುದರಿಂದ ಕೇಳಿದೆ" ಎಂದ.

"ಹೌದು. ಇಲ್ಲೇ, ಇದೇ ಮನೆಯೊಳಗಿದ್ದರು ; ಬಿಟ್ಟು ಊರಿಗೆ ಹೋಗಿ ಒಂದು ತಿಂಗಳಾಯಿತು. ನಾವು ಪಕ್ಕದ ಮನೆಯೊಳಗಿದ್ದೆವು. ಆ ಮನೆಯಲ್ಲಿ ನಮ್ಮ ಯ........ಜ........ಮಾನರು ತೀರಿಕೊಂಡರು.

ಈಗ ನಾನು, ನನ್ನ ಮಗ ರಾಮಜ್ಜ ಎಲ್ಲ ಈ ಮನೆಯಲ್ಲಿಯೇ ಇದೇವೆ.... ಒಳಗೆ ಬಾಣಂತಿ ಇದಾಳ? ಪಾಪ, ಪಾಪ, ಮಳೆ. ಒಳಗೆ ಕರೆಯಪ್ಪ ಮನೆಯೊಳಗೆ ಬರಲಿ. ಇವೊತ್ತು ಹೊಳೆ ದಾಟುವುದಕ್ಕಾಗುವುದಿಲ್ಲ ಬೆಳಗಿನಿಂದ ಒಂದೇಸಮನೆ ಹೊಡೆಯುತಿದೆ ಮಳೆ. ಸೊಂಟದ ಮಟ್ಟ ನೀರಿದೆ. ....... ರಾತ್ರಿಯ ಹೊತ್ತು ಹೊಳೆ ದಾಟಬಾರದು. ಒಳಗೆ ಕರೆಯಪ್ಪ, ಜಾಗ ಇದೆ. ಮಲಗಿಕೊಳ್ಳಲಿ'' ಎನ್ನುತ್ತ ಮುದುಕಿ ಎದ್ದು ಜಗಲಿಯ ಬಲಭಾಗದ ಕೋಣೆಯ ಬಾಗಿಲುಗಳನ್ನು ನೂಕಿ ತೆರೆದಳು. ಹನುಮಣ್ಣ “ಸದ್ಯ ನಂತಾಯಿ, ಅಷ್ಟು ಅನುಕೂಲ ಮಾಡಿಕೊಟ್ಟರೆ ತುಂಬ ಪುಣ್ಯಬರುತದೆ. ಬೆಳಿಗ್ಗೆ ನಾವು ಮಲ್ಲಿಗೆಹಳ್ಳಿಗೆ ಹೋಗುತೇವೆ” ಎನ್ನುತ್ತ ಗಾಡಿಯ ಹಿಂದೆ ಹೋಗಿ “ಇಳಿಯರಿ, ತಾಯಿ ಜಾಗ ಇದೆ. ಇಲ್ಲಿಯೇ ಮಲಗಿಕೊಳ್ಳೋಣ. ಬೆಳಗ್ಗೆ ಎದ್ದು ಹೊಳೆ ದಾಟಿದರಾಯಿತು. ಈ ತಾಯಿ ಉಪಕಾರ ಮಾಡಿದಾರೆ'' ಎಂದ. ಸೀತಮ್ಮ ಮಕ್ಕಳನ್ನಿಳಿಸಿ ನಿಧಾನವಾಗಿ ಇಳಿದಳು. ಹನುಮಣ್ಣ ಒಳಗೆ ಸಾಮಾನು ಹಾಕಿ ಗಾಡಿಯ ನೊಗ ನೆಲಕ್ಕಿಳಿಸಿದ. ಎತ್ತುಗಳು ನೆನೆಯುತ್ತಿದ್ದುದು ಆ ಮನೆಯ ಮುದುಕಿಗೆ ಸಹಿಸಲಿಲ್ಲ. ಹನುಮಣ್ಣನನ್ನು ಕುರಿತು “ಅಯ್ಯ, ನಿನ್ನ ಹೆಸರೇನೋ ನನಗೆ ಗೊತ್ತಿಲ್ಲ. ಎತ್ತುಗಳನ್ನು ಪಕ್ಕದ ಓಣಿಯಲ್ಲಿ ಕರೆದುಕೊಂಡು ಹೋಗಿ, ಕೊಟ್ಟಿಗೆಯಲ್ಲಿ ಕಟ್ಟು. ಬೇಕಾದಷ್ಟು ಜಾಗ ಇದೆ. ಅವು ಇಲ್ಲಿ ಏಕೆ ನೆನೆಯಬೇಕು, ಪಾಪ'' ಎಂದು ಓಣಿ ತೋರಿಸಿದಳು.

“ಬಹಳ ಒಳ್ಳೆಯದು ಅಜ್ಜಿ; ನನ್ನ ಹೆಸರು ಹನುಮಣ್ಣ'' ಎನ್ನುತ್ತ ಅತ ಎತ್ತುಗಳನ್ನು ಹೊಡೆದುಕೊಂಡು ಓಣಿಯೊಳಗೆ ನಡೆದ.

ಸೀತಮ್ಮ ಕಟ್ಟೆಯ ಮೇಲೆ ಮಕ್ಕಳೊಡನೆ ನಿಂತಿದ್ದಳು. ಒಳಗಿನಿಂದ ರಾಮಜ್ಜನ ಮಗಳು ಒಂದು ದೀಪ ಹಚ್ಚಿಕೊಂಡು ಕೋಣೆಯೊಳಗೆ ತಂದಿಟ್ಟು “ಒಳಗೆ ಬನ್ನಿ ತಾಯಿ, ಕಸ ಗುಡಿಸಿದೆ ಪಾಪ, ನೆಂದು ಬಿಟ್ಟಿರಿ. ಒಲೆಗೆ ಬೆಂಕಿ ಹಾಕಿ ಕೊಡುತೇನೆ” ಎಂದು ಒಳಗೆ ಹೋದಳು.

ಸೀತಮ್ಮ ಮಕ್ಕಳೊಡನೆ ಕೋಣೆಗೆ ಬಂದಳು. ಲಲಿತ ಅನ್ನದ ಪಾತ್ರೆಯ ಗಂಟನ್ನು ಒಳಗೆ ತಂದಿಟ್ಟಳು. ಒಂದಾದಮೇಲೊಂದು ಸಾಮಾನನ್ನು ಒಳಗಿರಿಸಿದ್ದಾಯಿತು. ರಾಮಜ್ಜನ ಮಗಳು ಒಂದು ಹೆಂಚಿನ ತುಂಬ

ಕೆಂಡ ಹಾಕಿಕೊಂಡು ಪುನಃ ಬಂದಳು. ಕೋಣೆಯ ಮೂಲೆಯಲ್ಲಿ ದೊಡ್ಡ ಒಲೆ ಇತ್ತು. ಅದಕ್ಕೆ ಸುರಿದು " ತಾಯೀ, ಮೈಕಾಸಿಕೊಳ್ಳಿ. ಎಳೆಮಗುವಿನ ತಾಯಿ, ಪಾಪ, ಎಂಥ ಮಳೆಗೆ ಸಿಕ್ಕಿಬಿಟ್ಟಿರಿ........ಮಗುವಿಗೆ ಎಷ್ಟು ತಿಂಗಳು ತಾಯಿ ? " ಎಂದು ಕೇಳಿದಳು.

" ಮೂರು ತಿಂಗಳಮ್ಮ " ಸೀತಮ್ಮ ಉತ್ತರ ಕೊಟ್ಟಳು.

"ಪಾಪ, ಮೂರು ತಿಂಗಳಿಗೇ ಈ ಮಳೆಯಲ್ಲಿ ನೆಂದರೆ ಗತಿಯೇನು!" ಎಂದಳು. ಆಕೆಗೆ ಸುಮಾರು ಇಪ್ಪತ್ತು ವರುಷ ಇರಬಹುದು. ನೋಡುವುದಕ್ಕೆ ಚೆನ್ನಾಗಿದ್ದಳು. ರಾಮಜ್ಜ ಒಳಗೆ ಕೆಮ್ಮುತ್ತಿದ್ದ. ಆತನಿಗೆ ಖಾಯಿಲೆ ಎಂದು ತಿಳಿಯಿತು. ರಾಮಜ್ಜನ ಮಗಳ ಹೆಸರು ಲಕ್ಷ್ಮಕ್ಕ. ಆಕೆ ಒಳಗೆ ಹೋಗಿ ಪುನಃ ಬಂದಳು.

" ತಾಯಿ, ಸಾಮಾನು ಕೊಡುತೇನೆ. ನೀವು ಅಡಿಗೆ ಮಾಡಿಕೊಳ್ಳುತೀರಾ ? '' ಎಂದು ಕೇಳಿದಳು.

ಸೀತಮ್ಮ " ಏನೂ ಬೇಡಮ್ಮ, ಊರಿಂದ ಅನ್ನ ತಂದಿದೇವೆ. ಬೇಕಾದಷ್ಟಿದೆ. ಸಾಕು, ನಮಗೋಸ್ಕರ ಬಹಳ ತೊಂದರೆ ತೆಗೆದುಕೊಳ್ಳುತಿದೀರಿ. ಬೇಡ, ತಾಯಿ '' ಎಂದಳು. ಆಕೆ, ಆಗತಾನೆ ಕರೆದ ಅರ್ಧ ಸೇರು ಹಸುವಿನ ಹಾಲನ್ನು, ಬೇಡವೆಂದರೂ ಕೇಳದೆ ತಂದಿಟ್ಟು ಹೊರಟು ಹೋದಳು. ಹನುಮಣ್ಣ ಎತ್ತು ಕಟ್ಟಿ, ಹುಲ್ಲು ನೀರು ಹಾಕಿ, ಗಾಡಿಯಲ್ಲಿದ್ದ ತಡಿಯೊಡನೆ ಕಟ್ಟೆಯ ಮೇಲೆ ಬಂದ. ಸೀತಮ್ಮ ಹಾಲನ್ನು ಒಲೆಯ ಮೇಲಿಟ್ಟು ಮಕ್ಕಳಿಗೆ ಅನ್ನ ಹಾಕಿದಳು. ಮೊಸರನ್ನ ಬಲು ಗಟ್ಟಿಯಾಗಿ ಬಿಟ್ಟಿತ್ತು. ಕಾಸಿದ ಹಾಲನ್ನು ಸ್ವಲ್ಪ ಬೆರಸಿದ ಮೇಲೆ ಸರಿಯಾಯಿತು. ಹನುಮಣ್ಣನನ್ನೂ ಊಟಕ್ಕೆ ಕರೆದಳು. ಎಲ್ಲರ ಊಟವೂ ಆದಮೇಲೆ ಹಾಸಿಗೆ ಹಾಸಿಕೊಂಡು ಮಲಗಿದರು. ಸೀತಮ್ಮ ಮಗುವಿಗೆ ಸ್ವಲ್ಪ ಹಾಲು ಹಾಕಿ, ಉಳಿದುದನ್ನು ತಾನು ಕುಡಿದು ಮಲಗಿಕೊಂಡಳು.

ಬೆಳಕು ಹರಿದಾಗಲೆ ಎಲ್ಲರಿಗೂ ಎಚ್ಚರ. ಆದರೆ ಜಗಲಿಯ ಮೇಲೆ ಮಲಗಿದ್ದ ಹನುಮಣ್ಣ ಮಾತ್ರ, ಎದ್ದು ಕಟ್ಟೆಯ ಮೇಲೆ ಸುಮ್ಮನೆ ಕುಳಿತಿದ್ದ. ತಾಯಿ ಮಕ್ಕಳು ಸೇರಿ ಸಾಮಾನು ಕಟ್ಟಿದರು. ಹನುಮಣ್ಣ ಎಲ್ಲವನ್ನೂ ಹೊತ್ತುಕೊಂಡು ಹೊಳೆಯ ದಡಕ್ಕೆ ಹೋದ. ಆಮೇಲೆ ಇವ

ರನ್ನು ಅಲ್ಲಿಗೆ ಕರೆದುಕೊಂಡು ಹೋಗಲು ಬಂದ. ಮುದುಕಿ ಜಗಲಿಯ ಮೇಲೆ ಕುಳಿತಿತ್ತು.

"ತಾಯಿ, ಗಾಡಿ ಎತ್ತು ಇಲ್ಲಿಯೆ ಇರಲಿ. ನಾನು ಇವರನ್ನು ಬಿಟ್ಟು ವಾಪಸು ಬಂದು ಗಾಡಿ ತೆಗೆದುಕೊಂಡು ಹೋಗುತೇನೆ. ನೀವು ತುಂಬ ಸಹಾಯ ಮಾಡಿದೀರಿ. ದೇವರು ಒಳ್ಳೆಯದು ಮಾಡಲಪ್ಪ" ಎನ್ನುತ್ತ ಮುಂದೆ ನಡೆದ.

ಮುದುಕಿ "ಅಯ್ಯೊ, ಇರಲಿ ಬಿಡಪ್ಪ ; ನಾವೇನು ಮಾಡಬಲ್ಲೆವು. ಎಲ್ಲ ದೇವರ ಕೆಲಸ" ಎಂದಳು.

ಹೊಳೆ ತುಂಬಿ ಹರಿಯುತ್ತಿತ್ತು. ದಡದಮೇಲೆ ಎಲ್ಲರನ್ನೂ ನಿಲ್ಲಿಸಿ, ಹನುಮಣ್ಣ ಮೊದಲು ಆಳ ನೋಡಿಬರಲು ಅಂಗಿ ಬಿಚ್ಚಿ, ಪಂಚೆಯನ್ನು ಮೇಲೆ ಕಟ್ಟಿಕೊಂಡ. ಹೊಳೆಯ ಅಗಲ ಅರುವತ್ತು ಗಜ ಇರಬಹುದು ; ಆಚೆ ದಡದಲ್ಲಿಯೇ ಮಲ್ಲಿಗೆಹಳ್ಳಿ ಕಾಣುತ್ತಿದೆ.

ಆತ ನೀರಿನಲ್ಲಿ ಬಲುದೂರ ಹೋಗಿದ್ದ. ನೀರು ಅವನ ಸೊಂಟದ ಮಟ್ಟಕ್ಕಿತ್ತು. ವಾಪಸು ಬಂದು, ಮೊದಲು ಇಬ್ಬರು ಮಕ್ಕಳನ್ನು ಭುಜದ ಮೇಲೆ ಕುಳ್ಳಿರಿಸಿಕೊಂಡು ಸಾಗಿಸಿದ. ಆಮೇಲೆ ಲಲಿತ, ಎಳೆಮಗು ಇಬ್ಬರನ್ನೂ ದಡ ತಲಪಿಸಿದ. ಆದರೆ ಬಾಣಂತಿಯನ್ನು ಹೇಗೆ ನೀರಿನಲ್ಲಿ ಕರೆದು ಕೊಂಡು ಹೋಗುವುದು? ಹನುಮಣ್ಣ "ತಾಯಿ ನಾಚಿಕೆಪಡದೆ ನನ್ನ ಭುಜದ ಮೇಲೆ ಕುಳಿತುಬಿಡಿ. ನನ್ನ ತಲೆಯನ್ನು ಬಿಗಿಯಾಗಿ ಹಿಡಿದು ಕೊಳ್ಳಿ. ಬಲುಬೇಗ ಆಚೆಯ ದಡಕ್ಕೊಯ್ದು ಬಿಡುತೇನೆ" ಎಂದು ಹೇಳಿದ.

ಸೀತಮ್ಮ "ಹನುಮಣ್ಣ, ನಾಚಿಕೆಯೇಕೆ? ನೀನು ನನಗಾಗಿ ಎಷ್ಟು ಶ್ರಮ ಪಡುತಿದೀಯೆ. ನಿಜವಾಗಿಯೂ ನೀನೇ ನನ್ನ ಭಾಗಕ್ಕೆ ತಂದೆ" ಎನ್ನುತ್ತ ಆತನ ಭುಜದಮೇಲೆ ಕುಳಿತುಕೊಂಡು ಎರಡು ಕೈಗಳಲ್ಲಿಯೂ ಆ ಮುದುಕನ ಬಿಳಿಗೂದಲತಲೆಯನ್ನು ಭದ್ರವಾಗಿ ಹಿಡಿದುಕೊಂಡಳು. ಮುದುಕ ನೀರಿನೊಳಗಿಳಿದು ನಿಧಾನವಾಗಿ, ಬಾಣಂತಿಯ ಕಾಲಿಗೆ ಸಹ ತಣ್ಣೀರು ಸೋಕದಂತೆ ದಡ ಮುಟ್ಟಿಸಿದ. ಆಮೇಲೆ ಸಾಮಾನು ಸಾಗಿ ಸಿದ್ದಾಯಿತು.

ಆಚೆ ದಡಕ್ಕೆ ಊರು ಕಾಣಿಸುತ್ತಿದ್ದರೂ, ಇಲ್ಲಿ ಊರು ಸೇರಲು

ಒಂದು ವೈಲಿ ಸುತ್ತಿಕೊಂಡು ಹೋಗಬೇಕು. ಹನುಮಣ್ಣ ಸಾಮಾನನ್ನೆಲ್ಲ ಹೊತ್ತು, ಎಲ್ಲರನ್ನೂ ನಿಧಾನವಾಗಿ ನಡಸಿಕೊಂಡು ಊರ ನಡುವೆ ಬಂದ. ಅರಳಿಯ ಕಟ್ಟೆಯಮೇಲೆ ಒಬ್ಬಾತ ಸುಮ್ಮನೆ ಕುಳಿತಿದ್ದ.

ಸೀತಮ್ಮ "ಇಲ್ಲಿ ಗಂಗಮ್ಮ ಎಂಬ ಒಬ್ಬ ಮುದುಕಿ ಇದ್ದಾರಲ್ಲ ಅವರ ಮನೆ ಯಾವುದಪ್ಪ ?" ಎಂದು ಕೇಳಿದಳು. ಆತ "ಅದೋ ಆ ತೆಂಗಿನ ಮರದ ಪಕ್ಕದ ಮನೆ" ಎಂದು ಬೆರಳುಮಾಡಿ ತೋರಿಸಿದ. ಎಲ್ಲರೂ ಮನೆ ಸೇರಿದರು.

ಮುದುಕಿ ಒಳಗೆ ಏನೋ ಮಾಡುತ್ತಿದ್ದಳು. ಸೀತಮ್ಮ ಒಳಗೆ ಹೋಗಿ "ಗಂಗಜ್ಜೀ, ಗಂಗಜ್ಜೀ" ಎಂದು ಕೂಗಿಳು. "ಯಾರದು ?" ಎಂದು, ಬೆನ್ನು ಬಾಗಿದ ಹಣ್ಣು ಮುದುಕಿ ಒಳಗಿಂದ ಬೇಗ ಬಂದಳು. ಸೀತಮ್ಮ "ನಾನು, ಸೀತಮ್ಮ. ಈಗ ಬಂದೆ" ಎಂದಳು.

ಮುದುಕಿಗೆ ತುಂಬ ಆನಂದವಾಯಿತು.. ಪಕ್ಕದಲ್ಲಿ ಹಾಸಿದ್ದ ಚಾಪೆ ತೋರಿಸಿ "ಬಾ ಕುಳಿತುಕೊ, ಮಕ್ಕಳೆಲ್ಲಿ ?" ಎಂದು ಕುತೂಹಲದಿಂದ, ಸಂಭ್ರಮದಿಂದ ಕೇಳಿದಳು ; ಜಗಲಿಯ ಹತ್ತಿರ ಹೋದಳು. ಹೊರಗೆ ನಿಂತಿದ್ದ ಹುಡುಗರನ್ನೂ ಹನುಮಣ್ಣನನ್ನೂ ನೋಡಿ "ಒಳಕ್ಕೆ ಬನ್ನಿ. ಎಲ್ಲ" ಎಂದಳು. ಹನುಮಣ್ಣ ಸಾಮಾನುಗಳನ್ನು ಒಳಗಿಟ್ಟು ಬಾಗಿಲಲ್ಲಿ ಬಂದು ಕುಳಿತ.

ಮುದುಕಿ ಮೊಮ್ಮಗಳ ಕ್ಷೇಮ ಸಮಾಚಾರ ವಿಚಾರಿಸಿಕೊಂಡಳು. ಹನುಮಣ್ಣ ಸೀತಮ್ಮನನ್ನು ಕುರಿತು "ತಾಯಿ, ರಾಯರು ಒಂದೇ ದಿನ ಅವಕಾಶ ಕೊಟ್ಟಿದ್ದರು. ಇನ್ನು ತಡ ಮಾಡಿದರೆ ಬಹಳ ರೇಗಿ ಬಿಡುತಾರೆ. ಆದುದರಿಂದ, ನನಗೆ ಅಪ್ಪಣೆ ಕೊಟ್ಟರೆ; ನಾನು ಹೊರಡುತೇನೆ" ಎಂದ.

ಸೀತಮ್ಮ "ಛೆ, ಛೆ, ಅದೇಕೆ ಹನುಮಣ್ಣ ? ನಡೆದ ವಿಷಯ ತಿಳಿಸು. ನೀನು ಈಗಲೇ ಹೋಗಲು ಸಾಧ್ಯವಿಲ್ಲ. ಊಟ ಮಾಡಿಕೊಂಡು ಮಧ್ಯಾಹ್ನ ಹೊರಟರೆ, ನಾಳೆ ರಾತ್ರಿ ಊರು ಸೇರುಬಿಡುತೀಯೆ. ಈಗ ಹೊರಡ ಕೂಡದಪ್ಪ" ಎಂದು ಕಟ್ಟಪ್ಪಣೆ ಮಾಡಿಬಿಟ್ಟಳು.

"ಆಗಲಿ ತಾಯಿ, ನಿಮ್ಮಿಷ್ಟ. ಹಾಗೆಯೇ ಆಗಲಿ" ಎನ್ನುತ್ತ ಹನು

ಮಣ್ಣ ತುಂಬಾಕಿನ ಚೀಲ ತೆಗೆದ.

ಮುದುಕಿ ಪಕ್ಕದ ಮನೆಯ ಹನುಮಂತರಾಯರ ಮಗಳನ್ನು ಕರೆದು ಅವಳ ಕೈಯಿಂದ ಎಲ್ಲರಿಗೂ ನೀರು ಹಾಕಿಸಿದಳು. ಬಿಸಿಬಿಸಿ ಕಾಫಿ ಮಾಡಿ ಎಲ್ಲರಿಗೂ ಕೊಟ್ಟು ಅಡುಗೆಯ ಮನೆಯೊಳಗೆ ಮೊಮ್ಮಗಳೊಡನೆ ಮಾತು ಕತೆ ಷುರು ಮಾಡಿದಳು.

ಸೀತಮ್ಮ ಮುದುಕಿಯನ್ನು ನೋಡಿ ಹತ್ತು ವರುಷಗಳಾಗಿದ್ದುವು. ಮುದುಕಿ ಸೀತಮ್ಮನಿಗೆ "ಬಾ, ಬಾ" ಎಂದು ಅನೇಕ ಕಾಗದಗಳನ್ನು ಬರೆದಿದ್ದರೂ ಬರಲಾಗಿರಲಿಲ್ಲ. ಈಗ ಸಾಧ್ಯವಾದುದಕ್ಕೆ ಕಾರಣವನ್ನೂ ನಡೆದ ರಾಮಾಯಣವನ್ನೂ ಸೀತಮ್ಮ ಮುದುಕಿಗೆ ತಿಳಿಸಿದಳು. ಮೊಮ್ಮಗಳ ಕಷ್ಟದ ಕತೆಯನ್ನು ಕೇಳಿ ತುಂಬ ದುಃಖವಾಯಿತು. ಮುದುಕಿ ಸೀತಮ್ಮನ ಮಕ್ಕಳನ್ನೆಲ್ಲ ನೋಡಿ ಸಂತೋಷಪಟ್ಟಳು. ಆದರೆ ಹದಿನಾಲ್ಕು ವರುಷ ತುಂಬಿ ನಿಂತಿದ್ದ ಲಲಿತಳನ್ನು ನೋಡಿದಾಗ ಮುಖ ಕೆಳಗಿಳಿಯಿತು.

ಮೊಮ್ಮಗಳ ಸುಖದುಃಖವನ್ನು ಇನ್ನೂ ಕೇಳಬೇಕೆನ್ನಿಸಿತು. ಸೀತಮ್ಮ ಒಂದಾದ ಮೇಲೊಂದು ಕತೆ ಹೇಳಲು ಮೊದಲು ಮಾಡಿದಳು. ತವರ ಮನೆಯ ಕತೆಯೂ ಷುರುವಾಯಿತು. ತಾನೆ ಹೆಚ್ಚು; ತನ್ನದೇ ಹೆಚ್ಚು, ಎಂದು ಮೆರೆಯುವ ಚೆಪ್ಪುತಕ್ಕಡಿ ತಮ್ಮನ ಕತೆ ಬಂತು. ಮುದುಕಿ ನಿಟ್ಟುಸಿರು ಬಿಟ್ಟಳು. ತಂದೆ ಸಹ ಈಕೆಯನ್ನು ಹೊರದೂಡಿದುದನ್ನು ಕೇಳಿ ಮುದುಕಿಯ ಹೊಟ್ಟೆ ಉರಿಯಿತು. "ಅಯ್ಯೋ, ಗೋವಿಂದು ಹೀಗಾದನೆ, ಆ ಪಾರ್ವತಿ ಕಟ್ಟಿಕೊಂಡಮೇಲೆ!" ಎಂದುಕೊಂಡಳು. ಮೊಮ್ಮಗಳಲ್ಲಿದ್ದ ಪ್ರೇಮ ಒಂದಕ್ಕೆರಡರಷ್ಟಾಯಿತು. "ಹಾಗಾದರೆ ಇಲ್ಲಿಯೆ ಇರು ತಾಯಿ. ನಾಲ್ಕೈದು ತಿಂಗಳು ಕಳೆದಮೇಲೆ ಊರಿಗೆ ಹೋದರಾಯಿತು" ಎಂದು ಹೇಳಿದಳು.

ಬೇಗ ಅಡುಗೆಯಾಯಿತು. ಎಲ್ಲರ ಊಟವೂ ಮುಗಿಯಿತು. ಹನುಮಣ್ಣನೂ ಊಟಮಾಡಿ ಒಂದು ತಾಸು ಜಗಲಿಯ ಮೇಲೆ ಮಲಗಿದ್ದ. ಮಧ್ಯಾಹ್ನ ಎರಡು ಗಂಟೆಗೆ ಎದ್ದು "ತಾಯಿ, ನನಗಿನ್ನು ಅಪ್ಪಣೆ ಕೊಡಿ. ನಾನು ಹೋಗಿಬಿಟ್ಟು ಬರುತೇನೆ. ನಿಮ್ಮ ಮಾವನವರ ಈ ನಡತೆಯನ್ನು ರಾಯರಿಗೆ ತಿಳಿಸುತೇನೆ. ನೀವು ಮೂರು ತಿಂಗಳು ಕಳೆದಮೇಲೆ ಹೋಗಿ.

ಅವನೇನಾದರೂ ಪುನಃ ಗಲಾಟೆ ಮಾಡಿದರೆ ನನಗೆ ಕಾಗದ ಬರೆಯಿರಿ, ತಾಯಿ. ಆ ಮುದುಕನನ್ನು ನಾನು ಸುಮ್ಮನೆ ಬಿಡುವುದಿಲ್ಲ. ನನ್ನನ್ನು ಮರೆಯ ಬೇಡಿ, ತಾಯಿ. ನೀವು ಬಹಳ ನೊಂದುಬಿಟ್ಟದೀರಿ. ಆದರೆ ದುಃಖವನ್ನು ಮನಸ್ಸಿಗೆ ಹಚ್ಚಿಕೊಂಡು ಏನಾದರೂ ಅನಾಹುತ ಮಾಡಿ ಕೊಳ್ಳ ಬೇಡಿ. ಮಕ್ಕಳ ಕಡೆ ನೋಡಿ........ನನ್ನ ಕತೆ ನಿಮಗೆ ಗೊತ್ತಿದೆ. ಕಷ್ಟ ಬಂದೇ ಬರುತದೆ. ಏನು ಮಾಡುವುದು. ನಮ್ಮ ಕರ್ಮ.......... ಆದರೆ ತಪ್ಪನ್ನೂ ತಿದ್ದಬೇಕು; ತಪ್ಪು ಮಾಡುವವರನ್ನು ಶಿಕ್ಷಿಸಬೇಕು. ನಾವು ಎದೆಗುಂದಬಾರದು. ನಾನು ಹೋಗಿಬಿಟ್ಟುಬರುತೇನೆ. ತಾಯಿ, ಮನಸ್ಸಿಗೆ ಯೋಚನೆ ಹಚ್ಚಿಕೊಳ್ಳಬೇಡಿ; ನನ್ನನ್ನು ಮರೆಯ ಬೇಡಿ" ಎಂದು ಕೇಳಿಕೊಂಡ.

ಸೀತಮ್ಮನಿಗೆ ದುಃಖ ತಡೆಯಲಾಗಲಿಲ್ಲ. "ಹನುಮಣ್ಣಾ, ನಿನಗೆ ಈ ಋಣ ನಾನೆಂದು ತೀರಿಸಲಿ, ಯಾವ ಜನ್ಮದಲ್ಲಿ ತೀರಿಸಲಪ್ಪಾ. ನಿನಗೆ ದೇವರು ಒಳ್ಳೆಯದನ್ನು ಮಾಡಲಿ. ನನ್ನನ್ನು ಮಾತ್ರ ಮರೆಯಬೇಡಪ್ಪ" ಎನ್ನುತ್ತ ಬೀದಿಯ ಬಾಗಲಿಗೆ ಬಂದಳು. ಹನುಮಣ್ಣ ಮಧ್ಯಾಹ್ನ ವೀಳೆಯ ದೆಲೆ ತರಲು ಎದರು ಅಂಗಡಿಗೆ ಹೋದಾಗ ಕೊಂಡು ತಂದಿದ್ದ ಕೊಬ್ಬರಿ ಮಿಠಾಯಿಯ ಚೂರುಗಳನ್ನು ಮಕ್ಕಳ ಕೈಯಲ್ಲಿಟ್ಟು, ಅವರಿಗೆಲ್ಲ ತಿಳಿಸಿ. ಮುದುಕಿಗೂ ಹೇಳಿ ಹೊಳೆಯ ಕಡೆ ಹೊರಟ. ಸೀತಮ್ಮ ಬೀದಿಯ ಬಾಗಿಲಲ್ಲಿಯೇ ನಿಂತು, ಮುದುಕಿ ಮರೆಯಾಗುವವರೆಗೂ ನೋಡು ತ್ತಿದ್ದಳು.

ಮಾತಿನಲ್ಲಿದ್ದ ಗಂಗಜ್ಜಿಗೆ ಬಲು ಬೇಗ ಕತ್ತಲೆಯಾದಂತಾಯಿತು. ಸೀತಮ್ಮನಿಗೆ ಏಕೊ ಬಹಳ ತಲೆನೋವು. ರಾತ್ರಿ ಊಟ ಮಾಡಲಾಗಲಿಲ್ಲ. ಅಜ್ಜಿಯ ಬಲವಂತದಿಂದ ಊಟದ ಶಾಸ್ತ್ರಮಾಡಿದಳು. ಒಂಬತ್ತು ಘಂಟೆಗೆ ತುಂಬ ಜ್ವರ ಬಂದುಬಿಟ್ಟಿತು. ಮುದುಕಿಗೆ ಬಲು ಗಾಬರಿಯಾಯಿತು. ಮೂರು ತಿಂಗಳ ಬಾಣಂತಿ; ನೂವನ ಪೆಟ್ಟು ತಿಂದು, ಗಾಡಿಯ ಪ್ರಯಾಣ ದಲ್ಲಿ ಮೈ ನೋಯಿಸಿಕೊಂಡು, ಮಳೆಯಲ್ಲಿ ನೆಂದುದರ ಫಲ! ಆಕೆ ಏನೇನೊ ಔಷಧ ಮಾಡಿದಳು. ಮಗುವೂ ರಾತ್ರಿಯಲ್ಲಿ ಏಕೊ ಬಹಳ ಅಳುತ್ತಿತ್ತು. ಜ್ವರ ಬೆಳಗಾಗುವವರೆಗೂ ಕಡಮೆಯಾಗಲಿಲ್ಲ.

೮

ಮಲ್ಲಿಗೆಹಳ್ಳಿಗೆ ಸೀತಮ್ಮ ಬಂದು ಮೂರು ತಿಂಗಳಾಯಿತು. ಆಕೆ ಮಾವನೂರಿಗೆ ಹೋಗಬೇಕೆಂದಿದ್ದಳು. ಆದರೆ ಆಕೆಯ ದುರದೃಷ್ಟದಿಂದ ಏನೇನೊ ಅನನುಕೂಲಗಳೊದಗಿದುವು. ಮುದುಕಿಯ ಜೊತೆಯಲ್ಲಿ ಹೆಚ್ಚು ದಿನ ಜೀವಿಸುವ ಸುಯೋಗ ಆಕೆಗಿರಲಿಲ್ಲ. ಮುದುಕಿ ತುಂಬ ಆಚಾರವಂತೆ. ಮೊಮ್ಮಗಳ ಮಗಳಾದರೂ ಅಧರ್ಮ, ಅನಾಚಾರ ಎಂದಿದ್ದರೂ ಹೊಲಸು. ಮದುವೆಯಾಗದ ಹದಿನಾಲ್ಕು ವರುಷದ ಹುಡುಗಿ ಮನೆಯೊಳಗಿದ್ದರೆ ಆಕೆಗೆ ಸಮಾಧಾನವಿಲ್ಲ. ಹೃದಯ ಮಮತೆಯಿಂದ ಕೂಡಿದ್ದರೂ ಮನಸ್ಸು ತಡೆಯಲಿಲ್ಲ. ಸೀತಮ್ಮನನ್ನು ಕರೆದು "ಸೀತಕ್ಕ ಎಲ್ಲಿಯಾದರೂ ಬೇಗ ಒಂದು ವರ ನೋಡಿ, ಮಗಳಿಗೆ ಮದುವೆ ಮಾಡಿಬಿಡಮ್ಮ. ನೋಡು, ಊರ ಜನರೆಲ್ಲ ಏನೇನೊ ಆಡಿಕೊಳ್ಳುತ್ತಾರೆ. ನಾನು ಇದುವರೆಗೂ ಒಂದೂ ಅಧರ್ಮ ಮಾಡದೆ, ಹೊಲಸು ಹಚ್ಚಿಕೊಳ್ಳದೆ ಜೀವಿಸಿದ್ದೆ. ಈಗ ಈ ತೊಡಕು ಬಂದಿದೆ. ಈ ವಿಷಯವನ್ನು ತಿಳಿಸಲು ನನಗೆ ಬಲು ಸಂಕಟ ವಾಗುತಿದೆ. ನಿನ್ನ ಮೇಲೆ ನನಗೆ ಕರುಣೆಯಿದೆ, ಪ್ರೀತಿಯಿದೆ. ನೀನು ನನ್ನೊಡನೆಯೇ ಇರು, ಆದರೆ ದೇವರು ಮೆಚ್ಚದ ಕೆಲಸವನ್ನೇಕೆ ಮಾಡ ಬೇಕು, ಹೇಳು? ಮದುವೆಯಾಗದ ಮುದಿಮಗಳು ಮನೆಗೆ ಮುಳ್ಳಂತೆ ಏನಾದರೂ ಮಾಡಿ ಬೇಗ ಮದುವೆ ಮಾಡಿಬಿಡು" ಎಂದಳು.

ಸೀತಮ್ಮ "ಗಂಗಜ್ಜಿ, ನೀನು ಹೇಳುವುದೆಲ್ಲ ಸರಿ. ಆದರೆ ನನ್ನ ಸ್ಥಿತಿ ನೋಡು. ತವರುಮನೆಯವರು ಓಡಿಸಿದಾರೆ; ಅತ್ತೆಯ ಮನೆಯವರು ಅರ್ಧ ಓಡಿಸಿದಾರೆ. ನನಗೆ ಪೂರ್ಣ ಅಧಿಕಾರವಿಲ್ಲ; ಮೂರು ಕಾಸು ಆಸ್ತಿಯಿಲ್ಲ. ಮದುವೆ ಮಾಡಲು ನನಗೆಲ್ಲಿದೆ ಹಕ್ಕು? ನನ್ನ ಅತ್ತೆ ಮಾವ ಸುಮ್ಮನೆ ಬಿಟ್ಟಾರೇನು? ನನ್ನ ಗಂಡ ಸುಮ್ಮನಿದ್ದಾರೆ? ಅವಳೇ ಮೊದಲ ಮಗಳು. ನಾನು ಎಳೆಮುಕ್ಕಳತಾಯಿ; ಭಿಕಾರಿಣಿ. ನನ್ನ ಮುಖ ನೋಡಿ ಕನಿಕರಪಟ್ಟು ಅಳಿಯನಾಗಿ ಬರುವ ವರ ಎಲ್ಲಿ? ಸಾವಿರ ಸಾವಿರಗಟ್ಟಲೆ ವರದಕ್ಷಿಣೆಯೊಡನೆ ವಧುವನ್ನು ಕರೆದುಕೊಂಡು ಊರೂರು ಅಲೆದರೂ ಮದುವೆ ನಿಶ್ಚಯವಾಗುವುದು ಕಷ್ಟ. ಹೀಗಿರುವಾಗ ಈ ಬಡವಿಯ

ಮಗಳನ್ನು ಯಾರುತಾನೇ ಮದುವೆ ಮಾಡಿಕೊಂಡಾರು, ಹೇಳು. ಈಗಿನ ಕಾಲದಲ್ಲಿ ಹದಿನಾಲ್ಕು ವರುಷ ಏನು ದೊಡ್ಡದು ? ಸುಬ್ಬಣ್ಣನ ಹೆಂಡತಿಗೆಷ್ಟು ವರುಷವೆಂದು ತಿಳಿದಿದೀಯೆ. ನೀನೇ ಈ ವಿಷಯದಲ್ಲಿ ಹೀಗೆ ಅಂದುಬಿಟ್ಟರೆ ಇನ್ನು ಊರಿನವರಿಗೇಕನ್ನಬೇಕು '' ಎಂದರು.

'' ಹಾಗಲ್ಲ, ಸೀತಕ್ಕ. ಊರಿನವರಿಗ ಹೆದರಿಯೆ ನಾನು ಹೀಗೆ ಹೇಳುತಿರುವುದು. ನನಗೆ ನಿಮ್ಮ ಮೇಲಿರುವ ಮಮತೆ ಕಡಮೆಯಾಗಿಲ್ಲ. ಆದರೆ ಜನ ಆಡುವ ಮಾತು ಕೇಳಲಾರೆ. ಮೊನ್ನೆ ದೇವಸ್ಥಾನಕ್ಕೆ ಹೋಗಿದ್ದಾಗ ಆ ರಂಗಣ್ಣನ ತಾಯಿ ಸುಬ್ಬಮ್ಮ, ಅವಳ ಸೊಸೆಯೊಂದಿಗೆ ನಮ್ಮ ಮನೆಯ ವಿಷಯವಾಗಿ ಏನೇನೋ ಪಿಸುಗುಟ್ಟಿದಳು. ನನಗೆ ತುಂಬ ಬೇಸರವಾಗುತಿದೆಯಮ್ಮ. ಜನರ ಮಾತು ಹೋಗಲಿ. ದೇವರು ಏನಂವಾನು ನಾಳೆ ನಮ್ಮ ಮನವನ್ನೂ ಸ್ಥಿರಪಡಿಸಕೊಳ್ಳಬೇಕಲ್ಲವೆ ? ಹೊಲಸನ್ನಂಟಿಸಿಕೊಳ್ಳಬಾರದು.. ”

" ಹಾಗಾದರೆ ನಾನೇನು ಮಾಡಲಿ, ಗಂಗಜ್ಜಿ? ಅವರ ಅಪ್ಪಣೆಯಿಲ್ಲದೆ, ನಮ್ಮ ಅತ್ತೆಮಾವಂದಿರ ಅನುಮತಿಯಿಲ್ಲದೆ ನಾನು ಮದುವೆ ಮಾಡಲಾರ ಈಗ ನಾನೇನು ಮಾಡಲಿ.... ..ನಿನ್ನ ದೇವರ ಕೆಲಸಗಳಿಗೆ, ಆಚಾರ ವ್ಯವಹಾರಕ್ಕೆ ತೊಂದರೆ ಬರುವುದಾದರೆ ನಾನೊಂದು ಉಪಾಯ ಹೇಳುತೇನೆ ಹಾಗೆ ಮಾಡು. ನಾನು ಇದನ್ನು ಸಂತೋಷದಿಂದ ತಿಳಿಸುತಿದೇನೆ. ಮನಸ್ಸಿಗೆ ಸ್ವಲ್ಪವೂ ಅಸಮಾಧಾನವಿಲ್ಲ ನಾನು ಹೇಳಿದಂತೆ ಮಾಡು. ನಿನ್ನ ಈ ಪಕ್ಕದ ಸಣ್ಣಮನೆ, ಹೇಗಿದ್ದರೂ ಆರುತಿಂಗಳಿಂದಲೂ ಖಾಲಿಯಾಗಿದೆ. ನಾನು ನನ್ನ ಮಕ್ಕಳೊಂದಿಗೆ ಅಲ್ಲಿರುತೇನೆ. ಜನರ ಕಣ್ಣಿಗೆ ಬೇರೆ ಸಂಸಾರ ಇದ್ದಂತೆಯೇ ಇರೋಣ. ಆಗ ಯಾರು ತಾನೇ ನಿನಗನ್ನಲು ಸಾಧ್ಯ ? ಹಾಗೆ ಮಾಡು. ನನ್ನ ಮನಸ್ಸಿಗೆ ಸ್ವಲ್ಪವೂ ನೋವಿಲ್ಲ. ನೀನು ಏನೂ ತಿಳಿದುಕೊಳ್ಳಬೇಡ” ಎಂದು ಸಲಹೆ ಕೊಟ್ಟಳು.

ಮುದುಕಿ ಸ್ವಲ್ಪ ಹೊತ್ತು ಸುಮ್ಮನಿದ್ದಳು ಆಕೆಗೆ ಆ ಏರ್ಪಾಡು ಅನುಕೂಲವಾಗಿ ಕಂಡಿತು “ ಹಾಗೆಯೇ ಮಾಡೋಣ ನೀನು ಇಲ್ಲಿರುವವರೆಗೂ ನಾನು ನಿನ್ನ ಸಂಸಾರದ ಖರ್ಚನ್ನೆಲ್ಲ ಕೊಡುತೇನೆ. ಮೇಲೆ ಮೂರು ರೂಪಾಯಿ ಕೊಡುತೇನೆ. ನೀನು ಆ ಮನೆಯಲ್ಲಿ ಸುಖವಾಗಿರು.

ಮನಸ್ಸಿಗೆ ಏನೂ ತಿಳಿದುಕೊಳ್ಳಬೇಡ. ನಿನಗೆ ತೊಂದರೆಯಾಗದಿದ್ದರೆ ಸಾಕು. ಮಾವನೂರಿಗೆ ಮುಂದಿನ ತಿಂಗಳು ಅಥವಾ ಆ ಮುಂದಿನ ತಿಂಗಳು ಹೋಗುವೆಯಂತೆ. ಹೇಗಿದ್ದರೂ ನಿನ್ನ ಮಾವನಿಗೆ ನೀನು ತಡೆದು ಬಂದಷ್ಟೂ ಆನಂದ. ನಮ್ಮೂರಿಗೆ ಅಪರೂಪಕ್ಕೆ ಬಂದಿದೀಯೆ. ಇನ್ನು ಒಂದೆರಡು ತಿಂಗಳು ಇಲ್ಲಿಯೇ ಇರು. ನನಗೆ ಮಕ್ಕಳನ್ನು ಕಂಡರೆ ಬಲು ಪ್ರೀತಿ. ನೀನು ಹೇಳಿದಂತೆಯೇ ಆಗಲಿ" ಎಂದು ಒಪ್ಪಿದಳು.

ಎರಡುವರುಷದ ಮಗುವಿಗೆ ದಿನಬಿಟ್ಟು ದಿನ ಜ್ವರ ಬರುತ್ತಿದ್ದುದರಿಂದ ಸೀತಮ್ಮ ಅಜ್ಜಿಯ ಆಸೆಯಂತೆ ಇನ್ನೂ ಒಂದು ಅಥವಾ ಎರಡು ತಿಂಗಳು ಬಿಟ್ಟು ಮಾವನೂರಿಗೆ ಹೋಗಲು ನಿಶ್ಚಯಿಸಿದಳು ; ಹಾಗೆ ಕಾಗದ ಬರಸಿ ಹಾಕಿದಳು. ಬೇರೆ ಮನೆ ಮಾಡಿಕೊಂಡಿರುತ್ತ ಒಂದೆರಡುವಾರ ಕಳೆಯಿತು. ಮಗುವಿಗೆ ಜ್ವರ ಬಿಡಲಿಲ್ಲ. ತುಂಬ ಬಡವಾಯಿತು

*     *     *     *     *

ಲಲಿತ ಸುಂದರಿಯಲ್ಲ. ಬಣ್ಣ ಕಪ್ಪು. ಆದರೂ ಮುಖದ ಮೇಲೊಂದು ಒಕ್ಕಲಿಯ ವರ್ಚಸ್ಸಿದೆ. ಹದಿನಾಲ್ಕು ವರುಷ ತುಂಬಿದೆ. ಮನೆಯ ಕೆಲಸಗಳನ್ನು ಮಾಡುವುದರಲ್ಲಿ ಬಲು ನಿಪುಣೆ. ಎದುರಂಗಡಿಯ ಈಶ್ವರಪ್ಪ ಯುವಕ. ಲಲಿತ ಸಾಮಾನು ತರಲು ಆತನ ಅಂಗಡಿಗೆ ಹೋದಾಗಲೆಲ್ಲ ಬಹಳ ಹಂಗಿಸುತ್ತಿದ್ದ. ಅವಳು "ಅಯ್ಯೋ, ಹೋಗಪ್ಪ" ಎಂದು ಮುಖ ಸೊಟ್ಟಮಾಡಿ, ನಾಚಿಕೆಯಿಂದ ಸಾಮಾನಿನೊಡನೆ ಮನೆಗೆ ಓಡಿ ಬಂದು ಬಿಡುತ್ತಿದ್ದಳು.

ಸೀತಮ್ಮನಿಗೆ ಈ ಊರಿನಲ್ಲಿಯೂ ಶನಿ ಬಿಡಲಿಲ್ಲ. ಅಜ್ಜಿಗೆ ಮೊದಲಿನಿಂದಲೂ ಗೂರಲುಕೆಮ್ಮಿತ್ತು. ಅದು ಜಾಸ್ತಿಯಾಗಿ ಜೊತೆಗೆ ಜ್ವರ ಬಂದುಬಿಟ್ಟಿತು. ಮೂರುದಿನದೊಳಗೆ ಆಕೆಯ ಸ್ಥಿತಿ ಮಿತಿಮೀರಿತು. ಸೀತಮ್ಮ ಏನೇನೋ ಔಷಧ ಮಾಡಿದಳು. ಖಾಯಿಲೆ ಗುಣಮುಖವಾಗಲಿಲ್ಲ. ಆಕೆಗೆ ಬಹಳ ಯೋಚನೆಯಾಯಿತು. ಮುದುಕಿಗೆ ತುಂಬ ಆಸ್ತಿಯಿತ್ತು. ಎರಡು ಮನೆ ಹೊಲ ತೋಟ ಎಲ್ಲ ಸೇರಿ ಹತ್ತುಸಾವಿರರೂಪಾಯಿ ಬಾಳಬಹುದು. ಆಕೆಯನಂತರ ಎಲ್ಲವೂ ಬೆಂಗಳೂರಿನಲ್ಲಿದ್ದ ಮೊಮ್ಮಗನಿಗೆ ಸೇರಬೇಕು. ಆತ ಅಲ್ಲಿ ಲಾಯರಾಗಿದ್ದಾನೆ. ಸೀತಮ್ಮನಿಗೆ ಆತನ ವಿಳಾಸ ಸರಿಯಾಗಿ

ಗೊತ್ತಿರಲಿಲ್ಲ ಹೆಸರು ತಿಳಿದಿತ್ತು. ಮುದುಕಿ, ವಿಳಾಸ ಹೇಳುವ ಪರಿಸ್ಥಿತಿ ಯಲ್ಲಿರಲಿಲ್ಲ ಬರಿಯ ಹೆಸರು ಬರೆದು ' ಲಾಯರ್ ' ಎಂದು ಬೆಂಗಳೂರಿಗೆ ಪತ್ರ ಹಾಕಿದರೆ ಆತನಿಗೆ ತಲುಪುತ್ತದೆಯೊ, ಇಲ್ಲವೊ. ತಿಳಿಯದು. ಆದರೆ ಯತ್ನವಿಲ್ಲ. ಅದೇ ವಿಳಾಸ ಬರಸಿ, ಕೂಡಲೆ ಹೊರಟು ಬರಬೇಕೆಂದು ಒಂದು ಕಾಗದ ಹಾಕಿಸಿದಳು. ಆತ ಬರಲೇ ಇಲ್ಲ.

ಮುದುಕಿ ಸಾಯುವ ರಾತ್ರಿ ಸೀತಮ್ಮನ ಮುಂಗಡಿ ಕೂಸು ರಾಮು ವಿಗೆ ಮೈಮೇಲೆ ಎಳ್ಳು ಹಾಕಿದರೆ ಸಿಡಿಯುವಷ್ಟು ಜ್ವರ. ಆದರೆ ಆಕೆ ಮಗುವಿನ ಮೇಲೆ ಗಮನವನ್ನೇ ಇಡದೆ, ಮುದುಕಿಯನ್ನುಳಿಸಲು ಬಲು ಪ್ರಯತ್ನ ಮಾಡಿದಳು. ಶಂಕರಪಂಡಿತರೂ ಅವರಿಗೆ ತಿಳಿದ ಔಷಧಗಳನ್ನೆಲ್ಲ ಮಾಡಿಬಿಟ್ಟರು ರಾತ್ರಿ ಹನ್ನೆರಡೂವರೆ ಗಂಟೆಗೆ ಮುದುಕಿ ಕೈ ಬಿಟ್ಟಳು. ಸೀತಮ್ಮನಿಗೆ ದಿಕ್ಕುತೋಚದಂತಾಯಿತು.

ಪಂಡಿತರು ತುಂಬ ಕರುಣಾಳಿಗಳು. ಅವರ ಸಹಾಯ ಅಷ್ಟಿಷ್ಟಲ್ಲ. ಮುಂದಿನ ಕೆಲಸಗಳು ನಡೆಯುವುದಕ್ಕೆ ಬಹಳ ಅನುಕೂಲಪಡಿಸಿದರು. ಸೀತಮ್ಮ, ಮುದುಕಿಯ ಮೊಮ್ಮಗ ನಾರಾಯಣಸ್ವಾಮಿಗೆ ಮುಖ ಸಿಕ ಲೆಂದು ಶವವನ್ನಿಟ್ಟುಕೊಂಡು ಎರಡುಗಂಟೆಗಳ ಕಾಲ ಕಾದಳು. ಆದರೆ ಆತ ಬರಲಿಲ್ಲ. ಮುಂದಿನ ಕೆಲಸಗಳೆಲ್ಲ ನಡೆದುಹೋದುವು.

ಮೂರನೆಯ ದಿನ ನಾರಾಯಣಸ್ವಾಮಿ ಹೆಂಡತಿಯೊಡನೆ ಬಂದ. ಆತ ಸೀತಮ್ಮನನ್ನು ನೋಡಿರಲಿಲ್ಲ. ಆಕೆಯ ಪರಿಚಯವೂ ಅವನಿಗಿರಲಿಲ್ಲ. ಅವನು ದೊಡ್ಡವರ ಮನೆಯಲ್ಲಿಯೇ ಬೆಳೆದವನು. ದೊಡ್ಡವರ ಹೆಣ್ಣನ್ನೇ ಮದುವೆ ಮಾಡಿಕೊಂಡಿದ್ದ. ಬಡವರು ಕಣ್ಣಿಗೆ ಕಾಣಿಸುತ್ತಿರಲಿಲ್ಲ. ಹತ್ತು ಸಾವಿರ ರೂಪಾಯಿಯ ಆಸ್ತಿ ಸಿಕ್ಕುವುದರಿಂದ ಕಷ್ಟಪಟ್ಟುಕೊಂಡು ಕಾರಿನಲ್ಲಿ ಗುಡ್ಡದಪುರಕ್ಕೆ ಬಂದಿದ್ದ. ಅಲ್ಲಿಂದ ಹೊಳೆ ದಾಟಿ, ಮಲ್ಲಿಗೆಹಳ್ಳಿಗೆ ಬಂದ ಕೂಡಲೆ ಈತ ನಾರಾಯಣಸ್ವಾಮಿಯೇ ಇರಬೇಕೆಂದು ಸೀತಮ್ಮ ಕಂಡು ಹಿಡಿದಳು ; ಆತನನ್ನು ಮಾತಾಡಿಸಿದಳು.

ಆತ ಊರಿನಲ್ಲಿ ಎರಡು ದಿನ ಇದ್ದು ಆಸ್ತಿಪತ್ರ, ಪಾತ್ರೆಪಡಗ, ಒಡವೆ ವಸ್ತ್ರ ಮುಂತಾದುವುಗಳನ್ನೆಲ್ಲ ತೆಗೆದುಕೊಂಡು ಊರಿಗೆ ಹೊರಡಲು ಸಿದ್ಧ ನಾದ. ಆತನಿಗೆ ಜನವೇ ಬೇಡ. ಅದರಲ್ಲಿಯೂ ಬಡವರನ್ನು ಕಂಡರೆ ದೂರ.

ಹಣ ಕಂಡರೆ ಹೆಣವೂ ಬಾಯಿ ಬಿಡುತ್ತವೆ; ಬಡವರು ಬೇಡವಾದರೂ ಅವರಿಂದ ಅಲ್ಪಸ್ವಲ್ಪ ಹಣ ಬರುವುದಾದರೆ ಬೇಕು. ಆ ಮುದುಕಿ ಪದೇ ಪದೇ ಪತ್ರ ಬರೆಯುತ್ತಿತ್ತು. ಪುಣ್ಯಾತ್ಮ ಒಂದಕ್ಕೂ ಉತ್ತರಕೊಟ್ಟಿರಲಿಲ್ಲ. ಗಂಗಜ್ಜಿ ಆತನನ್ನು ನೋಡಿ ಹದಿನೇಳು ವರುಷಗಳಾಗಿದ್ದುವು. ಸೀತಮ್ಮ ಮತ್ತು ಊರಿನವರು ಸಹಾಯ ಮಾಡಿದ ಉಪಕಾರಸ್ಮರಣೆ ಸಹ ಅವನಿಗಿರಲಿಲ್ಲ. ಸೀತಮ್ಮನನ್ನು ಕುರಿತು "ನೀವು ಈ ಊರಿನಲ್ಲಿಯೇ ಇರುವುದಾದರೆ ಈ ದೊಡ್ಡ ಮನೆಯನ್ನು ಸರಿಯಾದ ಬಾಡಿಗೆದಾರರಿಗೆ ಕೊಟ್ಟು ಬಾಡಿಗೆಯನ್ನು ನಮಗೆ ಸರಿಯಾಗಿ ತಲುಪಿಸುತ್ತೀರಿ. ನೀವಿರುವ ಭಾಗಕ್ಕೆ-ಬೇಕಾದರೆ-ಬಾಡಿಗೆ ಇಲ್ಲ. ಇರುವಷ್ಟು ದಿನ ಇರಿ" ಎಂದ

ಸೀತಮ್ಮನ ಮುಖ ಚಿಕ್ಕದಾಯಿತು ಆದರೆ ಆಕೆಗೇನು ಬೇಕಾಗಿತ್ತು? ಆಕೆ ಹೇಳಿಬಿಟ್ಟಳು. "ನಾನು ಇಲ್ಲಿರುವವರೆಗೂ ನೋಡಿಕೊಳ್ಳುತ್ತೇನೆ"

ಆಕೆ ಮಾಡಿದ ಶುಶ್ರೂಷೆಯಲ್ಲಿ ಬಾಲೆ ಬಳಲಿದ್ದಳು. ಒಂದು ವಾರದಿಂದ ನಿದ್ದೆಯ ಹೆಸರೇ ಇಲ್ಲ. ಮಗುವಿಗಂತೂ ಬಹಳ ಖಾಯಿಲೆ. ಒಂದೊಂದು ಸಾರಿ ಬಂದ ಜ್ವರ ಮೂರು ದಿನವಾದರೂ ಆರುವಂತಿಲ್ಲ. ಹಾಗಿದ್ದರೂ ಸೂತಕದ ನಾರಾಯಣಸ್ವಾಮಿ ದಂಪತಿಗಳಿಗೆ ಆದರದಿಂದ ಸತ್ಕರಿಸಿದಳು.

ಊರಿಗೆ ಹೊರಡುವ ದಿನ ಬೇಗ ಅಡುಗೆ ಮಾಡಿ ಬಡಿಸಿದಳು. ನಾರಾಯಣಸ್ವಾಮಿ—ದೇವರು ಏನು ಬುದ್ಧಿ ಕೊಟ್ಟನೊ!—ಹದಿನೈದು ರೂಪಾಯಿಗಳನ್ನು ತೆಗೆದು "ಇದು ನಿಮ್ಮ ಖರ್ಚಿಗಿರಲಿ, ನಾವು ಹೋಗಿ ಬರುತ್ತೇವೆ ನೀವು ಈ ಊರು ಬಿಡುವುದಾದರೆ ನನಗೊಂದು ಪತ್ರ ಬರೆಯಿರಿ. ನಾನು ಬಸವನಗುಡಿಯಲ್ಲಿದ್ದೇನೆ" ಎಂದು ಹೇಳಿ ಗುಡ್ಡದಪುರಕ್ಕೆ ಹೆಂಡತಿಯೊಡನೆ ಹೊರಟ. ಅಲ್ಲಿಂದ ತಮ್ಮ ಕಾರಿನಲ್ಲಿ ಬೆಂಗಳೂರು ಸೇರಿದರು.

ಸೀತಮ್ಮನಿಗೆ ಊರಿಗೆ ಹೊರಡಬೇಕೆಂಬ ಚಿಂತೆ ವಿಪರೀತವಾಯಿತು. ಆದರೆ ಮಗುವಿನ ಖಾಯಿಲೆ ಸ್ವಲ್ಪವೂ ಕಡಮೆಯಾಗಲಿಲ್ಲ. ಹೇಗೆ ತಾನೇ ಹೋಗುವುದೆಂದು ಸುಮ್ಮನಿದ್ದಳು. ತಾನು ಮಲ್ಲಿಗೆಹಳ್ಳಿಗೆ ಬಂದು ನಾಲ್ಕು ತಿಂಗಳು ಕಳೆದುವು.

ಮಗಳ ಮದುವೆ ಮಾಡದಿದ್ದುದು ಒಂದು ದೊಡ್ಡ ಶೂಲೆಯಾ

ಯಿತು. ಜನ ಏನೇನೊ ಆಡಿಕೊಳ್ಳುತ್ತಿದ್ದರು. ಅಪವಾದ ಹರಡಬೇಕೆಂದರೆ ಮನುಷ್ಯನಿಗೆ ಆನಂದ. ಸುಳ್ಳೊ ನಿಜವೊ, ಒಬ್ಬರನ್ನು ಆಡಿಕೊಂಡು ಕುಣಿದರೆ ಸಂತೋಷ. ಅದರಲ್ಲಿಯೂ ಈ ಹೆಂಗಸರ ಬಾಯಿ ಬಲು ಕೆಟ್ಟದು. ಕೆಲಸವಿಲ್ಲದ ಕಾಲದಲ್ಲೆಲ್ಲ ಕಾಡುಹರಟೆ. ಕೆಲಸ ಮಾಡುತ್ತಿರುವಾಗಲೂ ಮಾತಾಡುವವರಾರಾದರೂ ಸಿಕ್ಕರೆ ಪರಮಾನಂದ. ತಿಕ್ಕುವ ಪಾತ್ರೆಗಳು, ಗುಡಿಸುವ ಪೊರಕೆ, ನೀರು ತರುವ ಕೊಡ, ಉರಿಯುತ್ತಿರುವ ಒಲೆ ಮಾತಾಡುವುದನ್ನು ಕಲಿತುಬಿಟ್ಟರೆ ಅವರೆಲ್ಲ ಜಗತ್ತಿನಲ್ಲಿ ಹೆಣ್ಣು ಜೀವನಕ್ಕಿಂತ ಸುಖದ ಜೀವನ ಇನ್ನಿಲ್ಲ, ಎಂದುಬಿಡುತ್ತಾರೊ, ಏನೊ!

ಸೀತಮ್ಮ ಎಲ್ಲಿಹೋದರೂ ಆಕೆಗೆ ಕೇಳುವಂತೆ ಜನ "ಎದೆಯುದ್ದದ ಮಗಳನ್ನು ಮನೆಯಲ್ಲಿರಿಸಿಕೊಂಡು ಕುಳಿತಿದಾಳೆ. ಮನೆಯ ಎಲ್ಲ ಕೆಲಸ ಮಾಡುವುದು ಆಕೆಯೆ. ಎಲ್ಲಿ ಎಲ್ಲ ತನ್ನ ತಲೆಯ ಮೇಲೆ ಬೀಳುತದೆಯೊ ಎಂಬ ಭಯದಿಂದ, ಸೋಮಾರಿತನದಿಂದ ಮಗಳ ಮದುವೆಯ ಯೋಚನೆಯನ್ನು ಇದುವರೆಗೂ ಮಾಡಿಲ್ಲ. ಆ ಮಗಳೋ! ವಿದ್ಯೆಯಿಲ್ಲ; ಬುದ್ಧಿಯಿಲ್ಲ. ರೂಪ ಮೊದಲೇ ಇಲ್ಲ. ತಾಯಿಯ ಹತ್ತಿರ ನಿಲಿಸಿದರೂ ಮೂರು ಕಾಸು. ಗತಿಯಿಲ್ಲ ಇನ್ನೂ ಈಕೆ ಮದುವೆ ಮಾಡುವ ಪ್ರಯತ್ನ ಮಾಡದೆ ಸುಮ್ಮನೆ ಕುಳಿತರೆ ತನ್ನಷ್ಟಕ್ಕೆ ತಾನೇ ಆಗುತದೆಯೇನು? ಬಡವರಾದರೂ ಚಿಂತೆಯಿಲ್ಲ; ಒಳ್ಳೆಯ ರೂಪವಿದ್ದರೆ ಯಾರಾದರೂ ಬಂದು ಮದುವೆ ಮಾಡಿಕೊಳ್ಳಬಹುದು. ಆದರೆ ಈ ಗರಿಮುನಣಿಯನ್ನು ಮನೆಯಲ್ಲಿಟ್ಟುಕೊಂಡು ಕಾಯುತಿದ್ದರೆ ಯಾರು ಬಂದು ಬೇಡಿ, ಮದುವೆ ಮಾಡಿಕೊಂಡಾರು! ಈ ಊರಿನಲ್ಲಿ ಯಾರ ಮನೆಯಲ್ಲಿಯೂ ಇಷ್ಟು ದೊಡ್ಡ ಹೆಣ್ಣು ಮದುವೆಯಾಗದೆ ಇದುವರೆಗೆ ಕುಳಿತಿಲ್ಲ, ಥೂ! ಹೊಲಸು. ಊರಿಗೆಲ್ಲ ಕೆಟ್ಟ ಹೆಸರು. ಈ ಅನಿಷ್ಟವೇ ಆ ಮುದುಕಿಯನ್ನು ಬಲಿ ತೆಗೆದುಕೊಂಡದ್ದು" ಎಂದು ಏನೇನೋ ಆಡಿಕೊಂಡುಬಿಡುತ್ತಿದ್ದರು. ಸೀತಮ್ಮನಿಗೆ ತಡೆಯಲಾಗಲಿಲ್ಲ. ಊರಿನಲ್ಲಿರುವುದೇ ಬೇಸರವಾಯಿತು. ತಾನು ಹೇಗಿದ್ದರೂ ಊರಿಗೆ ಹೋಗಿಬಿಟ್ಟು ಬರುವ ಯೋಚನೆಯಲ್ಲಿದ್ದಾಳೆ. ಆದುದರಿಂದ ಈ ಊರಿನಲ್ಲಿಯೇ ಯಾರನ್ನಾದರೂ ಅಂಗಲಾಚಿ ಬೇಡಿ, ವರ ನಿಶ್ಚಯ ಮಾಡಿಕೊಂಡು ಹೋಗುವುದು; ಅಲ್ಲಿ ಅತ್ತೆ ಮಾವನವರಿಗೆ ಈ

ವಿಷಯ ತಿಳಿಸಿ ಅವರ ಅಪ್ಪಣೆ ಪಡೆಯುವುದು; ಆಮೇಲೆ ಮದುವೆ-ಎಂದು ನಿಶ್ಚಯಿಸಿಕೊಂಡಳು.

ಪಕ್ಕದ ಮನೆಯ ಹನುಮಂತರಾಯರ ಮಗಳು ಸೀತಮ್ಮನನ್ನು ತುಂಬ ಪ್ರೀತಿಯಿಂದ ಕಾಣುತ್ತಿದ್ದಳು. ಆಕೆಯೂ ಈ ಆಲೋಚನೆಯನ್ನೊಪ್ಪಿದಳು. ತಾನೂ ತನ್ನ ಕೈಲಾದ ಸಹಾಯವನ್ನು ಮಾಡುತ್ತೇನೆಂದಳು.

ಆ ಊರಿನಲ್ಲಿ ಬ್ರಾಹ್ಮಣರ ಮನೆಗಳೇ ಕಡಮೆ. ಅದರಲ್ಲಿಯೂ ಎರಡೇ ಹೊಯಿಸಳ ಕರ್ಣಾಟಕರ ಮನೆಗಳು. ಒಂದು ಶಂಕರಪಂಡಿತರ ಮನೆ; ಇನ್ನೊಂದು ಸರಿಗೆ ನಾರಾಯಣರಾಯರ ಮನೆ. ಪಂಡಿತರ ಮನೆಯಲ್ಲಿ ಯಾವ ವರವೂ ಇರಲಿಲ್ಲ. ಸರಿಗೆ ನಾರಾಯಣರಾಯರ ಎರಡನೆಯ ಮಗ ಒಬ್ಬ ಇದ್ದ. ಆತ ವಿದ್ಯಾವಂತನಲ್ಲ. ನೋಡುವುದಕ್ಕೂ ಅಷ್ಟೇನು ಲಕ್ಷಣವಾಗಿಲ್ಲ. ಹೊಲದ ಕೆಲಸಮಾಡಿಕೊಂಡಿದ್ದ. ನಾರಾಯಣರಾಯರಿಗೆ ಒಂದು ಮನೆ, ಹೊಲ ಇವುಗಳ ಹೊರತು, ಬೇರೆ ಏನೂ ಇರಲಿಲ್ಲ. ಹಿರಿಯ ಮಗ ತೀರಿಕೊಂಡಿದ್ದ.

ಹನುಮಂತರಾಯರ ಮಗಳು, ನಾರಾಯಣರಾಯರ ಹೆಂಡತಿಗೆ ಬಲು ಬೇಕಾದವಳು. ಆದುದರಿಂದ ಅವರಲ್ಲಿಗೆ ಸೀತಮ್ಮನನ್ನು ಕರೆದುಕೊಂಡು ಹೋಗಿ ಈ ವಿಷಯ ಮಾತಾಡಲು ಆಕೆ ಒಪ್ಪಿದಳು. ಆದರೆ ಊರಿನವರೆಲ್ಲ ಸೀತಮ್ಮನನ್ನು ನಿಕೃಷ್ಟವಾಗಿ ಕಾಣುತ್ತಿದ್ದರು. ಆಕೆ ಹನುಮಂತರಾಯರ ಮಗಳೊಂದಿಗೆ ನಾರಾಯಣರಾಯರ ಮನೆಗೆ ಹೋದಳು.

ನಾರಾಯಣರಾಯರು ಮನೆಯಲ್ಲಿರಲಿಲ್ಲ. ಅವರ ಹೆಂಡತಿಯೊಬ್ಬರೇ ಪಡಸಾಲೆಯಲ್ಲಿ ತರಕಾರಿ ಹೆಚ್ಚುತ್ತ ಕುಳಿತಿದ್ದರು; ಹನುಮಂತರಾಯರ ಮಗಳು–ಜಯಲಕ್ಷ್ಮಿಯನ್ನು ನೋಡಿ “ಬಾರಮ್ಮ, ಕುಳಿತುಕೊ” ಎಂದು ಚಾಪೆ ತೋರಿಸಿದರು. ಇಬ್ಬರೂ ಕುಳಿತರು. ಮೊದಲೇ ಈ ಪ್ರಸ್ತಾಪ ಮಾಡಲಾಗಲಿಲ್ಲ. ಜಯಲಕ್ಷ್ಮಿ ಏನೇನೋ ಮಾತಾಡಿ ಕೊನೆಗೆ ಈ ವಿಷಯಕ್ಕೆ ತಿರುಗಿದಳು.

“ಇವರು ಗಂಗಮ್ಮನ ಮೊಮ್ಮಗಳಲ್ಲವೆ? ನಿಮಗೆ ತಿಳಿದಿದೆಯಲ್ಲ. ಇವರ ಮಾವನವರು ಆಸ್ತಿವಂತರು; ಚೆನ್ನಾಗಿದಾರೆ. ಈಕೆ, ಮಗಳ ಮದುವೆ ಮಾಡಬೇಕಾಗಿದೆ. ನಿಮ್ಮ ಮನೆಯ ಸಂಬಂಧ ಬೆಳಸಬೇಕೆಂದು

ತುಂಬ ಆಸೆಯಾಗಿದೆ. ನೀವು ಕೃಪೆಯಿಟ್ಟು, ಒಪ್ಪಿ ಈಕೆಯ ಮಗಳನ್ನು ಸೊಸೆಯಾಗಿ ಕರೆದುಕೊಂಡರೆ ಇವರ ಮೇಲಿರುವ ದೊಡ್ಡ ಭಾರ ಇಳಿದಂತಾಗುತ್ತದೆ. ಹೆಂಗಸರಿಗಿರುವ ದೊಡ್ಡ ಕೊರತೆಯೇ ಇದೊಂದು. ನೀವು ಗಂಡು ಹೆತ್ತವರು. ಪುಣ್ಯ ಮಾಡಿದೀರಿ. ದಯವಿಟ್ಟು ಈಕೆಗಷ್ಟು ಉಪಕಾರ ಮಾಡಿ" ಎಂದಳು. ತರಕಾರಿಯ ಮೊರವನ್ನೂ ಈಳಿಗೆಮಣೆಯನ್ನೂ ಆಕೆ ಒಳಗಿಟ್ಟು ಬಂದರು. ಸೀತಮ್ಮ ಸಪ್ಪಗೆ ಮುಖ ಹಾಕಿಕೊಂಡು ಸುಮ್ಮನೆ ಕುಳಿತಿದ್ದಳು.

ಜಯಲಕ್ಷ್ಮಿ "ಸೀತಮ್ಮ ಅವರ ಮಾವನೂರಿಗೆ ಹೊರಡುತಾರೆ. ನೀವು ಒಪ್ಪಿದರೆ ಅವರ ಅತ್ತೆ ಮಾವಂದಿರಿಗೆ ಈ ವಿಷಯ ತಿಳಿಸಿ ಮುಂದಿನ ಏರ್ಪಾಡು ಮಾಡಬಹುದು. ನೀವು ಮೊದಲಿನಿಂದಲೂ ಬಡವರನ್ನು ಕಂಡರೆ ತುಂಬ ಕನಿಕರಪಡುತೀರಿ. ಆದುದರಿಂದ ನಿಮ್ಮ ಅಭಿಪ್ರಾಯ ತಿಳಿಸಿ, ಅನುಕೂಲ ಮಾಡಿಕೊಡಿ" ಎಂದು ಮುಂದುವರಿಸಿದಳು.

ಸೀತಮ್ಮ ಏನೂ ಮಾತಾಡಲಿಲ್ಲ. ನಾರಾಯಣರಾಯರ ಹೆಂಡತಿ ತಡಮಾಡದೆ "ನನ್ನ ಮಗನಿಗೆ ಈಗ ಲಗ್ನ ಮಾಡುವುದಿಲ್ಲ. ಮಾಡುವುದಾವರೂ ಹದಿನಾಲ್ಕು ವರುಷಕ್ಕೆ ಮೇಲ್ಪಟ್ಟ ಹುಡುಗಿ ನಮ್ಮ ಹುಡುಗನಿಗೆ ತುಂಬ ದೊಡ್ಡವಳಾಗುತಾಳೆ. ಅಂಥ ಹೆಣ್ಣನ್ನು ತರಲು ನನಗೆ ಇಷ್ಟವಿಲ್ಲ" ಎಂದಳು.

ಸೀತಮ್ಮನಿಗೆ ನೋವಾಯಿತು; ಮಾತಾಡಬೇಕೆನ್ನಿಸಿತು. "ನಮ್ಮ ಲಲಿತೆಗೆ ಹದಿನಾಲ್ಕು ತುಂಬಿ ಇನ್ನೂ ಮೂರು ತಿಂಗಳೂ ಮುಗಿದಿಲ್ಲಮ್ಮ. ಆದುದರಿಂದ ತಾವು ಈ ಬಡವಿಯ ಮೇಲಿನ ಕರುಣೆಯಿಂದಾದರೂ ಒಪ್ಪಿದರೆ ದೊಡ್ಡ ಉಪಕಾರ ಮಾಡಿದಂತಾಗುತದೆ" ಎಂದು ನೊಂದು ನುಡಿದಳು.

ನಾರಾಯಣರಾಯರ ಹೆಂಡತಿ "ಮದುವೆ ಮಾಡುವುದು ಬೊಂಬೆಯಾಟವಲ್ಲ. ಮುಂದಿನ ಯೋಚನೆಯಿಲ್ಲದೆ, ಸುಮ್ಮನೆ ದುಡುಕಿಬಿಡಬಾರದು. ನನ್ನ ಮಗನಿಗೆ ಇಷ್ಟವಿದೆಯೊ, ಇಲ್ಲವೊ ನನಗೆ ಮೊದಲೇ ತಿಳಿಯದು. ನನಗಂತೂ ಇಷ್ಟುಬೇಗ ಮದುವೆ ಮಾಡಲು ಇಷ್ಟವಿಲ್ಲ. ನಮ್ಮ ಯಜಮಾನರಿಗೆ ಇನ್ನೂ ಆ ಯೋಚನೆಯೇ ಹೊಳೆದಿಲ್ಲ. ಅವರಿಗೆ ಹೊಳೆದರೂ ಅವರ ಏರ್ಪಾಡು ಬೇರೆ. ನಿಮಗೆ ಮನಸ್ಸು ನೋಯದಿದ್ದರೆ ಹೇಳು

ತೇನೆ" ಎಂದರು.

"ಹೇಳಿ, ಅದಕ್ಕೇನು" ಸೀತಮ್ಮ ಎಂದಳು.

"ಅವರು ಐನೂರು ರೂಪಾಯಿ ಬರದೆ ಯಾವ ಹೆಣ್ಣನ್ನೂ ತೆಗೆದು ಕೊಳ್ಳುವುದಿಲ್ಲವೆಂದು ತೀರ್ಮಾನಿಸಿಬಿಟ್ಟಿದಾರೆ" ಎಂದು ವರನ ತಾಯಿ ನುಡಿದಳು.

ಈ ಮಾತು ಕೇಳಿದ ಕೂಡಲೆ ಸೀತಮ್ಮ ಕುಸಿದುಬಿಟ್ಟಳು. "ಅಯ್ಯೋ, ನಾನೆಲ್ಲಿಂದ ತರಲಿ ಅಷ್ಟೊಂದು! ನಮ್ಮ ಮಾವನವರಿಗೆ ಈ ವಿಷಯ ತಿಳಿಸಿದರೆ, ಅವರು ಎಂದೆಂದಿಗೂ ಒಪ್ಪುವುದಿಲ್ಲ. ಆದ್ದರಿಂದ ನಮಗೆ ಸಾಧ್ಯವಿಲ್ಲ. ಬನ್ನಿ ಜಯಲಕ್ಷ್ಮಮ್ಮ, ಹೋಗೋಣ. ಬೆಳಗಿನಿಂದ ಮಗು ತುಂಬ ಅಳುತಿದೆ" ಎಂದು ಹೇಳುತ್ತ ಎದ್ದಳು. ಜಯಲಕ್ಷ್ಮಿ, ನಾರಾಯಣ ರಾಯರ ಹೆಂಡತಿಯ ಮುಖವನ್ನೇ ನೋಡುತ್ತ ಕೆಲವು ಚಣ ಕುಳಿತಿದ್ದಳು. ಸೀತಮ್ಮ ಎಬ್ಬಿಸಿದ ಮೇಲೆ "ಹೋಗಿಬಿಟ್ಟುಬರುತೇನಮ್ಮ" ಎಂದು ಹೇಳಿ ಎದ್ದಳು. ಆಕೆ ಕುಂಕುಮ ತಂದುಕೊಟ್ಟರು; ಇಬ್ಬರೂ ಹೊರಗೆ ಬಂದುಬಿಟ್ಟರು.

ಮುದುಕಿಯು ಕೆಟ್ಟ ನಕ್ಷತ್ರದಲ್ಲಿ ತೀರಿಕೊಂಡಿತ್ತು. ಐದು ತಿಂಗಳು ಮನೆಗೆ ಯಾರೂ ಬಾಡಿಗೆಗೆ ಬರುವಂತಿರಲಿಲ್ಲ ನಾರಾಯಣ ಸ್ವಾಮಿಯು ಕೊಟ್ಟುಹೋದ ಹದಿನೈದು ರೂಪಾಯಿ ಮಗುವಿನ ಔಷಧಿಗಳಿಗೆ ಸಾಕಾಗ ಲಿಲ್ಲ. ಸೀತಮ್ಮನ ಸಂಸಾರ ಸಾಗುವುದೇ ಬಹಳ ಕಷ್ಟವಾಯಿತು. ಮೂರು ಕಾಸಿನ ಉತ್ಪತ್ತಿಯಿಲ್ಲ, ನಾಲ್ವರ ಹೊಟ್ಟೆ ಕಳೆಯಬೇಕು. ಜೊತೆಗೆ ರೋಗ ಬೇರೆ. ಎಲ್ಲರ ಮನೆಯಲ್ಲಿಯೂ ಸಾಲ. ಯಾರಿಗೂ ಬೇಡವಾದರು. ಶಂಕರ ಪಂಡಿತರು ದುಡ್ಡು ಸಿಕ್ಕುವವರೆಗೂ ಮಗುವಿಗೆ ಒಳ್ಳೊಳ್ಳೆಯ ಔಷದ ಗಳನ್ನು ಕೊಟ್ಟರು ಆದರೆ ಸೀತಮ್ಮನ ಕೈ ಬರಿದಾದುದು ತಿಳಿದಮೇಲೆ ಅವರೂ ಏಕೊ ಹಿಂದೆಗೆಯಲು ಮೊದಲು ಮಾಡಿದರು. ಜಯಲಕ್ಷ್ಮಮ್ಮ ಒಬ್ಬಳೇ ಈಕೆಯ ಮೇಲೆ ಅನಂತ ಮಮತೆ ಇಟ್ಟುಕೊಂಡಿದ್ದವಳು.

ಮಗು ಹೊಟ್ಟೆಗೆ ಏನೂ ತೆಗೆದುಕೊಳ್ಳುತ್ತಿರಲಿಲ್ಲ. ಅನ್ನ ಹಾಕಬಾರ ದೆಂದು ಪಂಡಿತರು ತಿಳಿಸಿದ್ದರು. ರವೆ ಸಿಕ್ಕುವುದೇ ಕಷ್ಟ. ಆದರೂ ಹೊಟ್ಟೆ ಬಟ್ಟೆ ಕಟ್ಟಿ, ಸ್ವಲ್ಪ ರವೆ ಸಂಪಾದಿಸಿಟ್ಟುಕೊಂಡಿದ್ದಳು. ಬರಿಯ ರವೆಗಂಜಿ

ಯೊಳಗೆ ಮಗು ಕಾಲ ಕಳೆಯುತ್ತಿತ್ತು. ಸೀತಮ್ಮನಿಗೆ ಊರಿಗ ಹೋದರೆ ಸಾಕಪ್ಪ, ಎನಿಸಿಬಿಟ್ಟಿತ್ತು. ಆಕೆ ಹೇಗೆ ಹೋಗುವುದು? ಮಗುವಿಗೆ ದಿನ ಬಿಟ್ಟು ದಿನ ಜ್ವರ ಬರುತ್ತಿದೆ. ಒಂದೊಂದು ಬಾರಿ ಬಂದ ಜ್ವರ ಕಡಮೆ ಯಾಗುವುದೇ ಇಲ್ಲ. ಆ ಒಡಕಲು ರೋಗಿಯೊಡನೆ ಮೂವತ್ತೈದು ಮೈಲಿ ಹೇಗೆ ಹೋಗುವುದು? ಇವಳಿಗೋಸ್ಕರ ಗಾಡಿ ಕಟ್ಟುವವರಾರು? ಊರಿಗೆ ಯಾರಾದರೂ ಹೋಗುತ್ತಿದ್ದರೆ ಅವರಲ್ಲಿ ಆ ರೋಗಿ ಮಗುವನ್ನು ಹೇಗೆ ಕರೆದ ಕೊಂಡು ಹೋಗುವುದು? ಯಾರೂ ಎಂಟು ರೂಪಾಯಿಗಿಂತ ಕಡ ಮೆಗೆ ಗಾಡಿ ಕಟ್ಟುವುದಿಲ್ಲ. ಸೀತಮ್ಮ ಅದೇ ಎಂಟು ರೂಪಾಯಿ ಇದ್ದರೆ, ಇನ್ನಾವುದಾದರೂ ಒಳ್ಳೆಯ ಔಷಧಿ ಮಾಡಬಹುದು; ಮಗುವಿಗಿಂತ ಯಾವ ನೂರು ಹೆಚ್ಚಲ್ಲ, ಎಂದುಕೊಂಡು ಸುಮ್ಮನಿದ್ದಳು.

ಆದರೆ ಮಗುವಿನ ಖಾಯಿಲೆ ಸ್ವಲ್ಪವೂ ಕಡಮೆಯಾಗಲಿಲ್ಲ. ದಿನ ದಿನಕ್ಕೂ ಜಾಸ್ತಿಯಾಯಿತು. ದೇಹವೆಲ್ಲ ನಶಿಸಿಹೋಗಿ ಮೂಳೆಮೂಳೆ ಬಿಟ್ಟುಕೊಂಡಿತ್ತು. ಕೈಕಾಲುಗಳು ಕಿರಿಬೆರಳ ದಪ್ಪನಾಗಿದ್ದುವು. ಎದೆಗೂಡು ಬಿಳಚಿಕೊಂಡು ತೆಳುಚರ್ಮಕ್ಕೆ ಅಂಟಿಕೊಂಡಿತ್ತು; ಮೂಳೆಮೂಳೆ ಕಾಣು ತ್ತಿತ್ತು. ಹೊಟ್ಟೆ ಬೆನ್ನಿಗೆ ಹತ್ತಿಕೊಂಡಿತ್ತು. ದೇಹಕ್ಕೆಲ್ಲ. ಕತ್ತು ಹೊರಲಾರದ ತಲೆಯೊಂದೆ ಹಿರಿದಾಗಿ ಕಾಣಿಸುತ್ತಿದ್ದುದು. ಕಣ್ಣುಗುಡ್ಡೆಗಳು ಇಂಗಿ ಹೋಗಿದ್ದುವು. ತುಟಿಗಳು ಸುರಟಿ ಕಪ್ಪಿಡಿದಿದ್ದುವು. ಮಗು ಬಹಳ ಸಂಕಟ ಪಡುತ್ತಿತ್ತು.

ಭಾನುವಾರ ಸಂಜೆ ಇದ್ದಕ್ಕಿದ್ದಂತೆಯೇ ಮಗುವಿನ ಖಾಯಿಲೆ ವಿಷ ಮಿಸಿತು. ಶಂಕರಪಂಡಿತರು ಏನೂ ಔಷಧವನ್ನೇ ಕೊಡಲಿಲ್ಲ. ಅವರಿಗೆ ಅದು ಉಳಿಯುವ ನಂಬಿಕೆ ಇರಲಿಲ್ಲವೊ, ಏನೊ. ಇಲ್ಲದಿದ್ದರೆ ಕಾಸು ಹುಟ್ಟದ ಕೂಸಿಗೆ ಏತಕ್ಕೆ ಕೊಡಲಿ ಎಂದುಕೊಂಡರೊ, ಏನೊ. ಅಂತೂ ಪಂಡಿತರು ಔಷಧ ಕೊಡುವುದನ್ನೇ ಬಿಟ್ಟುಬಿಟ್ಟರು. ಆದರೆ ಎರಡು ಹೊತ್ತೂ ಬಂದು ನೋಡಿಕೊಂಡು ಹೋದರು. ಏನೂ ಭಯವಿಲ್ಲ, ನಿಶ್ಶಕ್ತಿ. ಆದುದರಿಂದ ಹಾಗೆ ಸಂಕಟಪಡುತ್ತಿದೆ, ಎಂದು ಧೈರ್ಯ ಹೇಳಿ ಹೊರಟು ಹೋದರು.

ಸೀತಮ್ಮನಿಗೆ ರಾತ್ರಿ ಊಟಮಾಡಲು ಮನಸ್ಸೇ ಬರಲಿಲ್ಲ. ದಿನವೂ

ಎಲೆಯ ಮುಂದೆ ಕೂಡುವ ಶಾಸ್ತ್ರವನ್ನಾದರೂ ಮಾಡುತ್ತಿದ್ದಳು. ಆದರೆ ಅಂದೇಕೊ ತುಂಬ ಭಯವಾಗುತ್ತಿತ್ತು. ಲಲಿತ ಅನ್ನ ಮಾಡಿ ಮಕ್ಕಳಿಗೆಲ್ಲ ಬಡಿಸಿದಳು. ಎಂಟು ಗಂಟೆಯ ಹೊತ್ತಿಗೆ ಮಗುವಿನ ಉಸಿರಾಡುವ ಶಬ್ದ ಬಹಳ ಹೆಚ್ಚಾಯಿತು. ಕೈಕಾಲುಗಳು ಹಾಕಿದ ಹಾಗೆಯೇ ಇದ್ದುವು. ಕತ್ತನ್ನಾಡಿಸಲು ಸಹ ಶಕ್ತಿಯಿರಲಿಲ್ಲ. ಸೀತಮ್ಮ ಅದರ ಪಕ್ಕದಲ್ಲಿಯೇ ಕುಳಿತುಕೊಂಡು ಕಣ್ಣೀರುಡುತ್ತಿದ್ದಳು. ಲಲಿತ ಬಟ್ಟಲಲ್ಲಿ ರವೆಯ ತಿಳಿಗಂಜಿಯನ್ನು ತಂದು ತಾಯಿಯ ಹತ್ತಿರ ಇಟ್ಟಳು. ಸೀತಮ್ಮ ಸೀರೆಯ ಸೆರಗಿನಿಂದ ಕಣ್ಣೊರಸಿಕೊಂಡು ಒಂದು ಚಮಚ ಗಂಜಿಯನ್ನು ಮಗುವಿನ ಬಾಯಿಗೆ ಹಾಕುತ್ತ "ರಾಮು, ಗಂಜಿ ಕುಡಿಯಪ್ಪ" ಎಂದಳು. ದುಃಖ ಮಿತಿಮೀರಿತು. ಹಾಕಿದ ಗಂಜಿ ತೆರೆದ ಬಾಯೊಳಗೇ ಇತ್ತು. ಮುಖ ವಿಕಾರವಾಯಿತು; ಕಣ್ಣು ಬೆಳ್ಳಗಾಯಿತು.

ಸೀತಮ್ಮ ಗಾಬರಿಯಿಂದ "ರಾಮು, ಇಲ್ಲಿ ನೋಡು, ನಾನು. ನನ್ನನ್ನು ನೋಡು, ಮಗೂ!" ಎಂದರಚಿದಳು. ಬಾಯಲ್ಲಿದ್ದ ಗಂಜಿಯೆಲ್ಲ ಹೊರಗೆ ಬಂದುಬಿಟ್ಟಿತು. ಬಾಯಿ ಒಂದೆರಡು ಬಾರಿ ಅಲುಗಾಡಿತು. ಕಣ್ಣಿನ ಸ್ಥಿತಿ ಬದಲಾಯಿಸಲಿಲ್ಲ. ತಾಯಿ "ಅಯ್ಯೋ" ಎಂದು ಮಗುವಿನ ಮೇಲೆ ಬಿದ್ದಳು.

ಲಲಿತೆಗೆ ದಿಕ್ಕುತೋಚದಂತಾಯಿತು. ಮಗುವಿನ ಕಾಲಿನ ಹತ್ತಿರ ಕುಳಿತು ಗಟ್ಟಿಯಾಗಿ ಅತ್ತಳು. ಜಯಲಕ್ಷ್ಮಿ ಓಡಿಬಂದು ಇಬ್ಬರಿಗೂ ಎಷ್ಟೆಷ್ಟೊ ಸಮಾಧಾನ ಮಾಡಿದಳು. ಆದರೆ ಸೀತಮ್ಮನಿಗೆ ತಡೆಯ್ಯಲಾಗಲಿಲ್ಲ.

ಸೀತಮ್ಮ "ಈ ಮಗುವಿನ ಮೇಲೆ ತುಂಬ ಆಸೆ ಇಟ್ಟುಕೊಂಡಿದ್ದೆ. ನಿರಾಸೆಯಾಯಿತು. ಮಗು ಭರಣೀ ನಕ್ಷತ್ರದಲ್ಲಿ ಹುಟ್ಟಿದಾನೆ; ಧರಣಿ ಆಳುತಾನೆ, ಎಂಬುದು ಶಾಸ್ತ್ರ. ಈ ಹುಡುಗನಿಂದ ನಿಮಗೆ ಎಲ್ಲ ಕಷ್ಟಗಳೂ ಪಾರಾಗುತವೆ ಎಂದು ಏನೇನೋ ಹೇಳಿ, ಎಲ್ಲ ನನಗೆ ಆಸೆ ಹುಟ್ಟಿಸಿದ್ದರು. ಈಗ ಅದು ನನ್ನನ್ನೇ ಕೊಯ್ಯುತಿದೆ. ನಮ್ಮ ಕಷ್ಟ ಪರಿಹರಿಸುವುದರ ಬದಲು, ನಾನು ಕೊಡುತಿದ್ದ ದುಃಖದಿಂದ ತಾನೇ ಪಾರಾದ........ಒಂದು ಮೈಯಿಳಿಯಿತು; ದುಃಖವಾಗಲಿಲ್ಲ. ಒಂದ ಹೆಣ್ಣು ಆರು ತಿಂಗಳು ಬೆಳೆದು

ಸತ್ತಿತು. ಆಗ ದುಃಖವೂ ಹೆಚ್ಚಿರಲಿಲ್ಲ. ಇನ್ನೊಂದು ಹೆಣ್ಣು ಒಂದು ವರಷ ಬೆಳೆದು ಹೋಯಿತು. ಆ ದೊಡ್ಡ ದುಃಖವನ್ನು ಈ ಮಗುವಿನ ಮುಖ ನೋಡಿ ಮರೆತಿದ್ದೆ. ಈಗ ನಾನು ಈ ದುಃಖ ಹೇಗೆ ಕಳೆದುಕೊಳ್ಳಲಮ್ಮಾ! ರಾಮೂ, ನಮ್ಮತ್ತೆ ಮಾವಂದಿರಿಗೆ ಏನೆಂದು ಹೇಳಲಿ. ನಿನಗೆ ಖಾಯಿಲೆಯೆಂಬ ಸಮಾಚಾರವೂ ಅವರಿಗೆ ತಿಳಿಯಲಿಲ್ಲ. ನಾನೆಂಥ ಪಾಪಿಯಾದೆ. ಕಷ್ಟಪಟ್ಟುಕೊಂಡು ಊರಿಗೆ ಕರದೊಯ್ದಿದ್ದರೆ ಬದುಕುತಿದ್ದಿಯೊ, ಏನೊ. ದುಡ್ಡಿಲ್ಲದ ಈ ಭಿಕಾರಿಣಿಯ ಹೊಟ್ಟೆಯಲ್ಲಿ ಏಕೆ ಹುಟ್ಟಿದೆ, ರಾಮೂ. ನನ್ನ ಹೊಟ್ಟೆ ಉರಿಸಿ ಹೋಗಿ ಬಿಟ್ಟೆಯಲ್ಲ, ನಿನಗೂ ಕರುಣೆಯಿಲ್ಲವೆ? ನಾನು ಹಿಂದಿನ ಜನ್ಮದಲ್ಲಿ ನಿನಗೇನು ಕಷ್ಟಕೊಟ್ಟಿದ್ದೆನೊ.... ... ದೇವರಿಗೂ ಬುದ್ಧಿಯಿಲ್ಲವೆ? ನನಗೆ ದುಃಖವನ್ನು ಕೊಡಬೇಕೆಂಬಾಸೆಯೆ ಆವನಿಗೆ? ಎಂಥ ದೇವರೊ ಸುಡುಗಾಡುದೇವರು! .......ದೇವನೆಲ್ಲಿದಾನೆ. ಈ ಹೊಲಸುಪ್ರಪಂಚದಲ್ಲಿ? ಎರಡು ವರುಷ ಸಾಕಿ ಸಲಹಿ ಈಗ ಹೇಗೆ ನಿನ್ನನ್ನು ಬಿಟ್ಟಿರಲಿ? ಎತ್ತಿಕೊಂಡರೆ ಕತ್ತು ನೋವಾಗುವುದೆಂದು ಮೆತ್ತಗೆ ಹಾಸಿ ಮಲಗಿಸಿದ್ದೆ. ನಿನಗಿನ್ನೆಲ್ಲಿ ನೋವು! ಇನ್ನು ನಾನೆಂದು ನಿನ್ನನ್ನೆತ್ತಿಕೊಳ್ಳಲಿ? ಅಯ್ಯೋ, ರಾಮೂ, ರಾಮೂ, ಕಂದಾ, ಮಾತಾಡು" ಎಂದು ಏದುತ್ತ ಗೋಳಾಡುತ್ತ ಮಗುವಿನ ಕಳೇಬರವನ್ನೆತ್ತಿಕೊಂಡಳು. ಸತ್ತ ಮುಖಕ್ಕೆ ಮುತ್ತಿಟ್ಟಳು. ಮೈಗೆ ಹಚ್ಚಿಕೊಂಡು ಅತ್ತಳು. ಜೀವ ಬಂದೀತೆ!

ಮುಂದಿನ ಕೆಲಸ ನಡೆಯುವುದೇ ಕಷ್ಟವಾಯಿತು. ಸೀತಮ್ಮನ ಹತ್ತಿರ ಮೂರು ಕಾಸೂ ಗತಿಯಿಲ್ಲ. ಜಯಲಕ್ಷ್ಮಿ ತನ್ನ ತಾಯಿಗೆ ಕಾಣದಂತೆ ತನ್ನಲ್ಲಿದ್ದ ಮೂರು ರೂಪಾಯಿಗಳನ್ನು ತಂದು ಕೊಟ್ಟಳು. ಪಾಠಶಾಲೆಯ ಜವಾನ–ಸಿದ್ದಣ್ಣ ಬಹಳ ಒಳ್ಳೆಯವನು. ಹತ್ತಿರದಲ್ಲಯೇ ಇದ್ದ. ಆತನಿಗೆ ಆ ದೃಶ್ಯ ನೋಡಿ ಮನಸ್ಸು ಕರಗಿತು. ನೆರವಾಗಿ ಮಗುವನ್ನು ಮಣ್ಣುಮಾಡಿದ.

ಆದರೆ ಸೀತಮ್ಮನ ದುಃಖ ಕಡಮೆಯಾಗಲಿಲ್ಲ. ಬಲು ಹೆಚ್ಚಾಯಿತು. ಮೂರು ದಿನ ಊಟ ಬಿಟ್ಟುಬಿಟ್ಟಳು. ಜಯಲಕ್ಷ್ಮಿ ಬಹಳ ಸಮಾಧಾನ ಹೇಳಿದಳು. ಲಲಿತ "ಅಮ್ಮಾ, ಮನೆಗೆ ದೊಡ್ಡವಳಾದ ನೀನೇ ಹೀಗೆ ಅಳುತಾ ಕುಳಿತರೆ ನಮ್ಮ ಗತಿಯೇನಮ್ಮ?" ಎಂದಳು.

ಮೂರನೆಯ ದಿನ ಸೀತಮ್ಮ ಜಯಲಕ್ಷ್ಮಿಯ ಬಲವಂತದಿಂದ ಊಟದ ಶಾಸ್ತ್ರ ಮಾಡಿ ಬೀದಿಯ ಬಾಗಿಲ ಹತ್ತಿರ ಸುಮ್ಮನೆ ಕುಳಿತಿದ್ದಳು. ಹೊರಗಿದ್ದ ಶಾರದ ಎರಡು ಕಾಗದ ಹಿಡಿದುಕೊಂಡು ಬಂದಳು. ಸೀತಮ್ಮ ನಿಗೆ ನೋಡಿ ಗಾಬರಿಯಾಯಿತು. ಇದುವರೆಗೂ ಯಾರಿಂದಲೂ ಕಾಗದ ಬಂದಿರಲಿಲ್ಲ. ಅಲ್ಲದೆ ಅಂಚೆಯವ ವಾರಕ್ಕೊಮ್ಮೆ ಊರಿಗೆ ಬರುತ್ತಾನೆ. ಕಾಗದ ಬರೆದು ವಾರವಾಗಿರಬಹುದು. ಏನು ಸುದ್ದಿಯೊ, ಎಂದು ಕಾತರ ದಿಂದ ಆಕೆ ಕಾಗದಗಳನ್ನು ತೆಗೆದುಕೊಂಡಳು. ಆದರೆ ತನಗೆ ಓದು ಬರದು. ಲಲಿತ ಪಕ್ಕದ ಮನೆಯ ಜಯಲಕ್ಷ್ಮಿಯನ್ನು ಕರೆದುಕೊಂಡು ಬಂದಳು. ಜಯಲಕ್ಷ್ಮಿ ಎರಡು ಕಾಗದಗಳನ್ನೂ ಓದಿದಳು. ಸೀತಮ್ಮ ಕಾತರದಿಂದ ಎಲ್ಲವನ್ನೂ ಕೇಳಿದಳು; ಬಿಕ್ಕಿ ಬಿಕ್ಕಿ ಅಳಲು ಮೊದಲುಮಾಡಿದಳು.

ಮೊದಲನೆಯ ಕಾಗದ ರಾಘವಮ್ಮನವರಿಂದ ಬಂದಿತ್ತು. ಅವರಿಗೆ ಮೈಸೂರಿಗೆ ವರ್ಗವಾಯಿತಂತೆ. ಸೀತಮ್ಮನ ಗಂಡ ಸೀತಮ್ಮನನ್ನು ಬಿಟ್ಟು ಬೇರೆ ಮದುವೆ ಮಾಡಿಕೊಂಡನಂತೆ! ಮಗ ರಾಜುವಿಗೆ ತುಂಬಾ ಖಾಯಿಲೆ ಯಾಗಿ ಆಸ್ಪತ್ರೆಗೆ ಸೇರಿಸಿದಾರಂತೆ. ಎಲ್ಲ ಕೇಳಿ ಸೀತಮ್ಮನ ಹೃದಯಕ್ಕೆ ಸಿಡಿಲು ಬಡಿದಂತಾಯಿತು.

ಎರಡನೆಯ ಕಾಗದ ನಾಣನವರಿಂದ ಬಂದಿತ್ತು. ಸೀತಮ್ಮನ ಗಂಡ ನಿಗೆ ಆತ ಬೇರೆ ಮದುವೆ ಮಾಡಿದರಂತೆ. ಸೀತಮ್ಮನನ್ನು ಗಂಡ ಬಿಟ್ಟು ಬಿಟ್ಟನಂತೆ ಪಾಪ ಆಕೆಯನ್ನು ಮನೆಗೆ ಸೇರಿಸುವುದಿಲ್ಲವಂತೆ. ಕೇಳಿ ದುಃಖ ಮಿತಿ ಮೀರಿತು. "ಅಯ್ಯೋ" ಎಂದು ಕುಸಿದು ಬಿದ್ದಳು. ಜ್ಞಾನ ತಪ್ಪಿತು. ಲಲಿತೆ ಓಡಿಬಂದು "ಅಮ್ಮಾ" ಎಂದು ಬಿಕ್ಕಿ ಬಿಕ್ಕಿ ಅಳುತ್ತ ತಾಯಿಯ ತಲೆಯನ್ನೆತ್ತಿ ಗೋಳಿಡುವುದಕ್ಕೆ ಮೊದಲು ಮಾಡಿದಳು. ಎಳೆಯ ಮಗು ಅಳುತ್ತಿತ್ತು. ಶಾರದ ಅಳಲು ಶುರು ಮಾಡಿದಳು. ಜಯ ಲಕ್ಷ್ಮಿ ಕಾಗದಗಳನ್ನತ್ತ ಬಿಸುಟು, ಸೀತಮ್ಮನ ತಲೆಗೆ ನೀರು ತಟ್ಟಿ ಗಾಳಿ ಬೀಸಿದಳು.

ಸ್ವಲ್ಪ ಹೊತ್ತಿನಮೇಲೆ ಜ್ಞಾನ ಬಂದಿತು. ಆದರೆ ಮಗುವಿನಂತೆ ಗಟ್ಟಿಯಾಗಿ ರೋದಿಸತೊಡಗಿದಳು. ಜಯಲಕ್ಷ್ಮಿ ಸಮಾಧಾನ ಹೇಳಿದಳು:

"ದುಃಖಪಡುತಾ ಸುಮ್ಮನೆ ಕುಳಿತರೆ ಏನು ಪ್ರಯೋಜನ, ಸೀತಮ್ಮ?

ಮಗುವಿಗೆ ಖಾಯಿಲೆಯಂತೆ. ನೀವೇ ಹೀಗೆ ಅಳುತಾ ಕುಳಿತರೆ ಮಕ್ಕಳ ಪಾಡೇನು? ಧೈರ್ಯತಂದುಕೊಳ್ಳಿ. ಮುಂದಿನ ಯೋಚನೆ ಮಾಡೋಣ" ಎಂದಳು.

"ಮುಂದಿನ ಯೋಚನೆಯೇನು? ಈ ಕಾಗದ ಬರೆದು ಎಂಟು ದಿನದ ಮೇಲೆ ನನಗೆ ತಲಪಿದೆ. ನನ್ನ ಮಗುವಿನ ಗತಿಯೇನೊ: ಒಂದು ಮಗು ವನ್ನು ಕಳೆದುಕೊಂಡು ಮೂರುದಿನ ಕಳೆದಿಲ್ಲ. ನಾನೆಂಥ ಪಾಪಿ! ಮಗು ನನ್ನನ್ನೆಷ್ಟುಬಾರಿ ಕೂಗಿ ಕೂಗಿ ನರಳುತಿದಾನೊ. ಈಗ ಅವನ ಗತಿ ಏನಾಗಿದೆಯೊ! ಚಂಡಾಲರು! ಪಾಪಿಗಳು! ನನ್ನನ್ನೋಡಿಸಿದುದಲ್ಲದೆ ಮಗುವಿನ ಖಾಯಿಲೆಯ ಸುದ್ದಿಯನ್ನು ಸಹ ಕಾಗದದಲ್ಲಿ ಬರೆದಿಲ್ಲ. ಇವರ ಮನೆ ನಾಶವಾಗಲಿ. ವಂಶ ಒಣಗಿ ಹೋಗಲಿ. ನೊಂದು ನೊಂದು ನುಡಿ ಯುತಿದೇನೆ. ಮತ್ತೈದೆಯ ಮಾತು ಸುಳ್ಳಾಗದಿರಲಿ.. ಅಯ್ಯೋ, ನಾನು ಈಗೇನು ಮಾಡಲಿ?" ಎಂದು ಗೋಳಿಟ್ಟಳು. ಬಲುಹೊತ್ತಿನಮೇಲೆ ಸಮಾ ಧಾನ ತಂದುಕೊಂಡಳು.

ಮಾರನೆಯ ದಿನವೇ ಊರಿಗೆ ಹೊರಡಲು ನಿಶ್ಚಯ ಮಾಡಿಕೊಂಡು ದಾಯಿತು. ಆದರೆ ಜಯಲಕ್ಷ್ಮಿಯ ಸಲಹೆಯಂತೆ ಮಕ್ಕಳಿಬ್ಬರನ್ನೂ, ಲಲಿತೆಯನ್ನೂ ಆ ಊರಿನಲ್ಲಿಯೇ ಬಿಟ್ಟು ತಾನೊಬ್ಬಳೇ ಹೊರಡಲು ನಿಶ್ಚ ಯಿಸಿದಳು. ಒಂದು ಸೀರೆಯ ಗಂಟಿನೊಡನೆ ಕೊಟ್ಟ ಉಪ್ಪಿನಕಾಯಿಯ ಪುಟ್ಟಗಂಟು ತೆಗೆದುಕೊಂಡು ಹೊಳೆದಾಟಿ, ಗುಡ್ಡದಪುರ ಸೇರಿದಳು. ಆದರೆ ಊರಿಗೆ ಗಾಡಿ ಸಿಕ್ಕಬೇಕಲ್ಲ! ರಾಮಜ್ಜನ ಮಗಳು ಮೇಲಿನ ಮನೆ ವೀರಭದ್ರಪ್ಪನವರ ಗಾಡಿಯಲ್ಲಿ ಕಳಿಸಿಕೊಡುವ ಏರ್ಪಾಡು ಮಾಡಿದಳು. ಆ ಗಾಡಿ ದೇವರ ದಯದಿಂದ ಸೀತಮ್ಮನ ಮಾವನೂರಿಗೇ ಹೊರಟಿತ್ತು.

ಗಾಡಿ ಹೊರಟಿತು. ಒಂದು ಮೈಲಿ ಹೋಗುವುದರೊಳಗಾಗಿಯೇ ಮೋಡ ತುಂಬ ಕವಿಯಿತು. ಮಳೆ ಬಂದೇ ಬಿಟ್ಟಿತು. ವಿಪರೀತ ಗಾಳಿ. ಸೀತಮ್ಮನಿಗೆ "ಇದೇನು ಇಷ್ಟೊಂದು ಅಪಶಕುನ" ಎನ್ನಿಸಿತು; ಗಾಬರಿ ಯಾಯಿತು. ಆದರೆ ಎದೆಯನ್ನು ಕಲ್ಲುಮಾಡಿಕೊಂಡುಬಿಟ್ಟಳು. "ಸಾವಿರ ಪೆಟ್ಟು ತಿಂದವಳಿಗೆ ಎಲ್ಲ ಸಾಮಾನ್ಯವಾಗಿ ಬಿಟ್ಟಿದೆ" ಎಂದುಕೊಂಡಳು. ಗಂಟೆ ಎಂಟಾಯಿತು. ಗಾಡಿ ನಿಧಾನವಾಗಿ ಹೋಗುತ್ತಿತ್ತು. ಆದರೊಳಗೆ

ವೀರಭದ್ರಪ್ಪನವರ ಮಗಳು ಮಕ್ಕಳೊಡನೆ ಮಾವನೂರಿಗೆ ಹೊರಟಿದ್ದಳು. ದಾರಿ ಸವೆಯಲು ಹರಟೆ ಬೇಕಲ್ಲ! ಮಾತುಕತೆ ಶುರುವಾಯಿತು. ಸೀತಮ್ಮ ತನ್ನ ಎಲ್ಲ ಕತೆಯನ್ನೂ ಹೇಳಿ ಈಗ ಈ ಗಾಡಿಯಲ್ಲಿ ಹೊರಟಿರುವ ಕಾರಣ ವನ್ನೂ ತಿಳಿಸಿದಳು. ಗಾಡಿ ಊರಿಗೆ ಹತ್ತಿರವಾಯಿತು.

೯

ಊರೆಲ್ಲ ಭಣ ಭಣ. ಸೀತಮ್ಮನಿಗೆ ಊರು ಶ್ಮಶಾನದಂತೆ ಕಂಡಿತು ರಾಧಮ್ಮನವರ ಮನೆಯ ಬಾಗಿಲಿಗೆ ಬೀಗ ಬಿದ್ದಿತ್ತು. ಅವರಿಗೆ ವರ್ಗ ವಾದುದು ಆಕೆಗೆ ಗೊತ್ತು. ಶಾರದಮ್ಮನವರ ಮನೆಯ ಬಾಗಿಲಿಗೆ ಬಂದಳು. ಪಕ್ಕದಲ್ಲಿಯೇ ಇದ್ದ ಮಾವನ ಮನೆಯ ಕಡೆ ಕಣ್ಣು ಬಲವಂತವಾಗಿ ನೋಡಿತು. ಬೀದಿಯ ಬಾಗಿಲು ತೆರೆದಿತ್ತು. ಯಾರ ಸುಳಿವೂ ಇಲ್ಲ. ಶಾರ ದಮ್ಮ ಒಳಗೆ ಏನೊ ಮಾಡುತ್ತಿದ್ದರು. ಸೀತಮ್ಮ ಹೊರಗೆ ನಿಂತೇ ಶಾರ ದಮ್ಮನನ್ನು ಕರೆದಳು. ಒಳಗಿನಿಂದ ಬಂದು, ನೊಂದ ಸೀತಮ್ಮನ ಮುಖ ನೋಡಿದ ಕೂಡಲೆ ಆಕೆಗೆ ತುಂಬ ದುಃಖವಾಯಿತು. "ಬಾ ಸೀತಮ್ಮ ಯಾವಾಗ ಬಂದೆ? ಯಾರ ಗಾಡಿ ಬಂತು? ರಾಜುವಿಗೆ ಬಹಳ ಖಾಯಿಲೆ. ನಿನ್ನ ಯಜಮಾನರು ಸದಾ ಆಸ್ಪತ್ರೆಯಲ್ಲಿಯೇ ಇರುತ್ತಾರೆ. ನಿಮ್ಮ ಮಾವ ಮಗನಿಗೆ ಹೊಸ ಮದುವೆ ಮಾಡಿದರು. ನಿಮ್ಮ ಮಾವನ ಜೀವ ಇರುವ ವರೆಗೂ ನಿನ್ನನ್ನು ಅವರ ಮನೆಗೆ ಸೇರಿಸಿಕೊಳ್ಳುವುದಿಲ್ಲವಂತೆ ...." ಎಂದರು.

ಬಾಗಿಲ ಹತ್ತಿರವೇ ಗಂಟನ್ನಿಳಿಸಿ ಕುಳಿತುಕೊಳ್ಳುತ್ತ "ಸೇರಿಸದಿದ್ದರೆ ಹಾಳಾಗಲಿ, ಶಾರದಮ್ಮ ... ಒಂದು ಬಟ್ಟಲು ನೀರು ಕೊಡಿ. ತುಂಬ ಬಾಯಾರಿಕೆ. ಈಗ ಆಸ್ಪತ್ರೆಯ ಕಡೆ ಹೋಗಿಬಿಟ್ಟುಬರುತೇನೆ. ಈ ಗಂಟು ಇಲ್ಲಿರಲಿ" ಎಂದಳು. ಶಾರದಮ್ಮ ಒಳಗೆ ಹೋಗಿ ನೀರು ತಂದು ಕೊಟ್ಟರು. ಆಕೆ ಕುಡಿಯುತ್ತಿದ್ದಳು. ಶಾರದಮ್ಮ "ಸೀತಮ್ಮ ನೀನು ಮಗುವಿನ ಆರೋಗ್ಯ ನೋಡಿಕೊಂಡು ಊರಿಗೆ ವಾಪಸು ಹೊರಡುವವರೆಗೂ ನಮ್ಮ ಮನೆಯಲ್ಲಿಯೇ ಇರು" ಎಂದಳು. ಸೀತಮ್ಮ ಬಟ್ಟಲನ್ನು ಕೆಳಗಿಟ್ಟು ಮೇಲಕ್ಕೆದ್ದು ಹೊರಗೆ ಹೊರಟಳು.

ಶಾರದಮ್ಮ ಬಾಗಿಲಲ್ಲಿ ನಿಂತು, ಸುಮ್ಮನೆ ನೋಡುತ್ತಿದ್ದಳು.

"ಮೂರು ನಾಲ್ಕು ತಿಂಗಳಲ್ಲಿ ಈಕೆ ಎಷ್ಟು ಬದಲಾಯಿಸಿ ಬಿಟ್ಟಿದಾಳೆ! ತಲೆಯ ಕೂದಲೆಲ್ಲ ಉದುರಿ ಹೋಗಿದೆ. ಬೊಗಸೆಯಗಲದ ತುರುಬು ನಿಂಬೆಹಣ್ಣಿನ ಗಾತ್ರವಾಗಿದೆ. ತಲೆ ಎಣ್ಣೆನೀರು ಕಂಡು ಎಷ್ಟು ದಿನವಾಯಿತೊ! ಬಾಣಂತಿಯಾದಾಗ ಎಷ್ಟು ಕಷ್ಟಪಟ್ಟಳು! ಅರುವತ್ತು ವರುಷದವಳಂತೆ ಕಾಣುತಾಳೆ. ಊರಿನಲ್ಲಿ ಏನೇನು ಕಷ್ಟಪಟ್ಟಳೊ, ಏನೊ. ಏನಾದರೂ ಖಾಯಿಲೆಯಾಗಿತ್ತೊ, ಏನೊ" ಎಂದುಕೊಂಡು ಒಳಗೆ ಹೋದಳು.

ಶಾರದಮ್ಮನವರ ಮನೆಯ ಎಡಗಡೆ ರಸ್ತೆಯಲ್ಲಿ ನೇರವಾಗಿ ಹೋಗಿ ಬಲಕ್ಕೆ ತಿರುಗಿದರೆ ಒಂದು ತೆಂಗಿನ ಮರ ಸಿಕ್ಕುತ್ತದೆ. ಆ ತೆಂಗಿನ ಮರದಿಂದ ಮೂರನೆಯ ಕಟ್ಟಡವೇ ಆಸ್ಪತ್ರೆ. ಗಂಟೆ ನಾಲ್ಕಾಗಿರಬಹುದು. ಸುತ್ತಮುತ್ತಿದ ಹಳ್ಳಿಗಳಿಗೆಲ್ಲ ಅದೊಂದೇ ಆಸ್ಪತ್ರೆ ಆದರೆ ಎಲ್ಲ ಜನರೂ ಔಷಧಕ್ಕೆ ಸಂಜೆ ಐದರ ಮೇಲೆ ಬರುತ್ತಿದ್ದರು. ಆಸ್ಪತ್ರೆಯ ಮುಂದೆ ಬೇರೆ ಯಾರೂ ಇರಲಿಲ್ಲ. ಸೀತಮ್ಮ ದೂರದಿಂದಲೇ ಕಟ್ಟೆಯ ಮೇಲಿದ್ದ ತನ್ನ ಗಂಡನನ್ನು ನೋಡಿದಳು. ಆತ ಈಕೆಯನ್ನು ನೋಡಲಿಲ್ಲ. ದುಂಡು ಕಂಬಕ್ಕೊರಗಿ ನೆಲವನ್ನೇ ನೋಡುತ್ತ ಚಿಂತಿಸುತ್ತಿದ್ದ ಬಹಳ ಆತುರದಿಂದ ಹೊರಟ ಸೀತಮ್ಮನ ನಡಗೆ, ನಡುಕದೊಡನೆ ನಿಧಾನವಾಯಿತು ಮೆಲ್ಲಗೆ ಕಟ್ಟೆಯ ಕೆಳಗೆ ಬಂದಳು. ನೆರಳು ನೋಡಿ ಕೃಷ್ಣಮೂರ್ತಿ ಎಚ್ಚೆತ್ತ.

ಆದರೆ ಆತ ಮಾತಾಡಿಸಲಿಲ್ಲ. ಸುಮ್ಮನೆ ಮತ್ತೆ ನೆಲ ನೋಡತೊಡಗಿದ. ಈಕೆಯ ಮನಸ್ಸು ತಡೆಯಲಿಲ್ಲ. ಮಗನನ್ನು ನೋಡುವ ಕಾತರ ಹೆಚ್ಚಾಯಿತು; ಗಾಬರಿ ಇಮ್ಮಡಿಸಿತು. ಅವಳ ಬಾಯಿ ಸುಮ್ಮನಿರಲಿಲ್ಲ.

"ಮಗು ಹೇಗಿದಾನೆ?"

ಗಂಡ ಉತ್ತರ ಕೊಡಲಿಲ್ಲ; ಕೊಡಬೇಕೆನ್ನಿಸಿತು. ಆದರೆ ಏಕೊ, ಮನಸ್ಸು ತಡೆಯಲಿಲ್ಲ. ತಕ್ಷಣವೇ ಒಳಗೆ ಹೊರಟುಹೋದ. ಸೀತಮ್ಮನಿಗೆ ದುಃಖ ಬಂದಿತು. ತಡೆದುಕೊಂಡು, ಅಲ್ಲಿಯೆ ನಿಂತುಬಿಟ್ಟಳು.

ಕೃಷ್ಣಮೂರ್ತಿ ವಸ್ತ್ರದಲ್ಲಿ ಮುಖ ಒರಸಿಕೊಳ್ಳುತ್ತ ಪುನಃ ಹೊರಗೆ ಬಂದ. ಆಕೆಯನ್ನು ನೋಡಿದ; ಅದೇ ಕಂಬದ ಹತ್ತಿರ ನಿಂತುಕೊಂಡ. ಒಂದೆರಡು ಗಳಿಗೆ ಸುಮ್ಮನಿದ್ದ. ಆಕೆ ಕದಲಲಿಲ್ಲ.

" ಏಕೆ ಬಂದೆ ? "

" ರಾಜುವನ್ನು ನೋಡಲು ಬಂದೆ. ಹೇಗಿದಾನೆ ? "

" ಹುಷಾರಾಗಿದಾನೆ "

" ಬಹಳ ಖಾಯಿಲೆಯೆಂದು ರಾಧಮ್ಮನವರು ಪತ್ರ ಬರೆದಿದ್ದರು. ನೀವು ಎಡಬಿಡದೆ ಇಲ್ಲಿಯೇ ಇದೀರಂತೆ "

" ಹೌದು "

" ಹಾಗಾದರೆ ಈಗ ಹೇಗಿದಾನೆ ? "

" ಹುಷಾರಾಗಿಯೇ ಇದಾನೆ."

" .......ದಯುವಿಟ್ಟು, ನನಗೊವ್ಮೆ ತೋರಿಸಿರಿ "

" ಆದಾಗದು. ಯಾರೂ ನೋಡಕೂಡದೆಂದು ವೈದ್ಯರು ಅಪ್ಪಣೆ ಮಾಡಿದಾರೆ. ಹೆಚ್ಚು ತೊಂದರೆಪಡಿಸಬಾರದಂತೆ ... . ನಾನು ನೋಡಿದರೆ ಸಾಲದೆ ? "

" ನನಗೂ ಒಮ್ಮೆ ಮಗುವನ್ನು ನೋಡಬೇಕೆಂಬಾಸೆಯಿದೆ."

" ಆಮೇಲೆ ನೋಡಿದರಾಯಿತು. ಈಗ ಇಲ್ಲಿ ಹೆಚ್ಚು ಹೊತ್ತು ನಿಲ್ಲಬೇಡ, ಹೊರಡು "

" . . ..." ಸುಮ್ಮನೆ ಮುಖವನ್ನೇ ನೋಡುತ ನಿಂತಳು. ಅವನ ಕಣ್ಣುಗಳಲ್ಲಿಯೂ ನೀರು ತುಂಬಿತ್ತು. ಆಕೆಯ ಕಣ್ಣುಗಳಲ್ಲಿಯೂ ನೀರು ಬಂದಿತ್ತು. ಆದರೂ ಸೀತಮ್ಮನ ಬಾಯಿಂದ ಕಾತರದ ಮಾತು ಹೊರಟಿತು.

" ನೀವು ನನ್ನನ್ನು ಬಿಟ್ಟಿದೀರಂತೆ. ನಾನು ನಿರ್ಭಾಗ್ಯಳು. ಅಜ್ಜಿಯನ್ನು ಕಳೆದುಕೊಂಡೆ. ಮಗು ರಾಮುವೂ ನನ್ನ ಕೈಬಿಟ್ಟ" ಎಂದು ದುಃಖದಿಂದ ಹೇಳಿದಳು. ಕೃಷ್ಣಮೂರ್ತಿಯ ಕೆನ್ನೆಯ ಮೇಲಿದ್ದ ಕಂಬನಿ ಹೆಂಡತಿಗೆ ಕಾಣುವಂತೆಯೇ ಪಟ್ಟನೆ ನೆಲದ ಮೇಲೆ ಬಿದ್ದಿತು. ವಸ್ತ್ರದಿಂದ ಮುಖವನ್ನೊರಸಿಕೊಳ್ಳುತ್ತ

" ಸರಿ, ಇನ್ನು ನೀನು ಹೊರಡು, ಇಲ್ಲಿರಬೇಡ; ನನ್ನ ಕಣ್ಣೆದುರಿಗಿರಬೇಡ ... ಈ ಊರಿನೊಳಗಿರಬೇಡ" ಎಂದ.

" ಮಗುವಿಗೆ ಹೇಗಿದೆ ? " ಎಂದು ಪುನಃ ಕೇಳಿದಳು.

" ಹುಷಾರಾಗಿದಾನೆ "

"ನಾನೊಮ್ಮೆ ನೋಡಬಾರದೆ?" ಎಂದು ಪುನಃ ಪ್ರಶ್ನೆ.

"ಬೇಡ, ಹೊರಡು. ನೀನು ಮೊದಲು ಇಲ್ಲಿಂದ ಹೊರಡು. ನನ್ನೆದುರಿಗೆ ನಿಲ್ಲಬೇಡ" ಎನ್ನುತ್ತ ಒಳಗೆ ಹೊರಟುಹೋದ. ಸೀತಮ್ಮ ಕೆಲ ಹೊತ್ತು ಸುಮ್ಮನೆ ನಿಂತಿದ್ದಳು. ಆಮೇಲೆ ಇಲ್ಲಿ ನಿಂತು ಏನು ಪ್ರಯೋಜನ, ಎಂದುಕೊಂಡು ನಿಧಾನವಾಗಿ ಹೊರಟಳು. ಮನಸ್ಸು ತಡೆಯದೆ ಕಣ್ಣಿಗೆ ಮರೆಯಾಗುವವರೆಗೂ ಆಗಾಗ ತಿರುಗಿ ನೋಡುತ್ತಿದ್ದಳು. ಶಾರದಮ್ಮನವರ ಮನೆ ಸಿಕ್ಕಿತು.

ಆಕೆ ಬಾಗಿಲಲ್ಲಿ ಕಾದು ಕುಳಿತಿದ್ದಳು. ಸೀತಮ್ಮನನ್ನು "ಬಾ, ಕುಳಿತುಕೊ, ಮಗುವಿಗೆ ಹೇಗಿದೆ?" ಎಂದು ಕೇಳಿದಳು.

"ಮಗು ಹುಷಾರಾಗಿದಾನಂತೆ. ಏನೂ ಭಯವಿಲ್ಲವಂತೆ. ನಾನು ನೋಡಬೇಕೆಂದೆ. ಆದರೆ ಯಾರೂ ಹೆಚ್ಚು ತೊಂದರೆಪಡಿಸಬಾರದೆಂದು ವೈದ್ಯರು ಹೇಳಿದಾರಂತೆ, ಆದುದರಿಂದ ನಾನು ನೋಡಲಾಗಲಿಲ್ಲ."

"ನಿನಗೆ ಇದೆಲ್ಲ ಯಾರು ಹೇಳಿದರು? ನೀನು ಆಸ್ಪತ್ರೆಗೆ ಹೋಗಿದ್ದೆಯಾ?"

"ಹೋಗಿದ್ದೆ. ಅವರು ಅಲ್ಲಿಯೇ ನಿಂತಿದ್ದರು. ನಾನು ಅವರನ್ನೇ ಕೇಳಿದೆ. ಅವರೇ ಇದೆಲ್ಲ ಹೇಳಿದರು. ಮಗು ಹುಷಾರಾಗಿದಾನಂತೆ. ಏನೂ ಭಯವಿಲ್ಲವಂತೆ"

"ಇಲ್ಲ, ಸೀತಮ್ಮ. ತಿಪ್ಪಾಜೋಯಿಸರ ಮಗಳು ನಿನ್ನೆ ಹೋಗಿದ್ದಳು. ಅವನಿಗೆ ತುಂಬ ಖಾಯಿಲೆಯಂತೆ?"

"ಇಲ್ಲ ಶಾರದಮ್ಮ, ನನಗೆ ಅವರೇ ಹೇಳಿದರು. ಏನೂ ಭಯವಿಲ್ಲವಂತೆ. ರಾಜು ಹುಷಾರಾಗಿದಾನಂತೆ."

"ಸರಿ. ಒಳ್ಳೆಯದಾಗಲಮ್ಮ, ನೀನು ಊಟ ಯಾವಾಗ ಮಾಡಿದ್ದೆಯೊ ಏನೊ. ಏಳು, ಸ್ನಾನಮಾಡು. ಊಟಮಾಡುವೆಯಂತೆ."

"ಬೇಡ, ಶಾರದಮ್ಮ. ಈಗಾಗಲೆ ಆರು ಗಂಟೆಯ ಸಮಯ. ಸ್ನಾನಮಾಡುತೇನೆ. ರಾತ್ರಿ ಊಟಮಾಡಿದರಾಯಿತು. ಈ ಎರಡು ಸೀರೆಗಳನ್ನು ನೆನಸುತೇನೆ. ಉಡಲು ಒಂದು ಸೀರೆ ಕೊಟ್ಟರೆ ಸಾಕು. ನನಗೆ ಹಸಿವೆಯೇ ಇಲ್ಲ" ಎಂದಳು.

ಸೀತಮ್ಮನ ಸ್ನಾನವಾಯಿತು. ಪಡಸಾಲೆಯಲ್ಲಿ ಬಂದು ಕುಳಿತಳು. ಶಾರದಮ್ಮ, ಹತ್ತಿರದಲ್ಲಿಯೆ ಕುಳಿತು "ಸೀತಮ್ಮ, ನಿಮ್ಮ ಮಾವನವರು ಮಗನಿಗೆ ಬೇರೆ ಮದುವೆ ಮಾಡಿ ಎರಡು ತಿಂಗಳ ಮೇಲಾಯಿತು. ಆ ಹುಡುಗಿ ಇಲ್ಲಿಗೆ ಬಂದಿದ್ದಳು. ಮಾರಿಯ ಹಾಗಿದಾಳೆ. ನಂಜಮ್ಮನನ್ನು ಇಲ್ಲ ಅನ್ನಿಸಿ ಬಿಡುತಾಳೆ. ನಿನ್ನ ಗಂಡನನ್ನು ಬುಟ್ಟಿಯಲ್ಲಿಟ್ಟುಕೊಂಡು ಮಾರಿ ಬಂದುಬಿಡುತಾಳೆ. ಮಾವನ ಆಟ ಅವಳ ಹತ್ತಿರ ಸ್ವಲ್ಪವೂ ನಡೆಯುವುದಿಲ್ಲ. ಈಗ ಪುನಃ ತವರೂರಿಗೆ ಹೋಗಿದಾಳೆ. ಬಂದ ಮೂರು ದಿನದಲ್ಲಿ ನಿಮ್ಮ ರಾಜುವನ್ನು ತುಂಬ ಗೋಳಾಡಿಸಿದಳು. ರಾಜು ಬಂದು ಎಲ್ಲ ಹೇಳುತಿದ್ದ. ಅಮ್ಮ ಕಾಗದವನ್ನು ಬರೆಯಲಿಲ್ಲ. ಊರು ಸೇರಿದಳೊ, ಇಲ್ಲವೊ, ಹೇಗಿದಾಳೊ, ಏನೊ ಎಂದು ಆಗಾಗ ಬಹಳ ಯೋಚಿಸುತಿದ್ದ. ಪಾಪ, ಈಗ ಖಾಯಿಲೆ ಬಿದ್ದುಬಿಟ್ಟಿದಾನೆ. ನಿಮ್ಮತ್ತೆಯ ಮನೆಯವರಂತೂ ಊರಿನಲ್ಲಿ ಎಲ್ಲರಿಗೂ ಶತ್ರುಗಳಾಗಿದಾರೆ. ಶೆಟ್ಟಿಯ ಸಾಲ ತೀರಿಸಲಿಲ್ಲ. ಅವನು ಮತ್ತೆ ಬಂದಿದ್ದ. ಈ ಮನೆ ಆತನಿಗೆ ಸೇರುವ ಹಾಗಿದೆ. ಈಗ ಮನೆಯೊಳಗೆ ಏನೂ ಸ್ವಾರಸ್ಯವಿಲ್ಲ. ಮನೆಯ ಲಕ್ಷ್ಮಿಯ ಹಾಗೆ ಇದ್ದ ಸೊಸೆಯನ್ನು ಇಷ್ಟು ನೋಯಿಸಿದರೆ ದೇವರು ಸುಮ್ಮನಿರುತಾನೆಯೆ?" ಎಂದರು.

ಸೀತಮ್ಮ "ಏನು ದೇವರೊ! ಆತನಿಗೆ ಕಣ್ಣಿಲ್ಲಿದೆ, ಶಾರದಮ್ಮ? ನಾನಷ್ಟು ಕಷ್ಟಪಟ್ಟರೂ ದೇವರಿಗೆ ಕರುಣೆ ಬರಲಿಲ್ಲ. ನನಗಿನ್ನೂ ಮೇಲಿಂದ ಮೇಲೆ ಕಷ್ಟಕೊಡುತಲೇ ಇದಾನೆ ನನ್ನಜ್ಜಿ ತೀರಿಕೊಂಡಳು. ನನ್ನ ಮುಂಗಡಿಕೂಸು ರಾಮು ಹೋಗಿ ನಾಲ್ಕು ದಿನಗಳಾದುವು."

"ಅಯ್ಯೊ ಮಗುವಿಗೇನಾಗಿತ್ತು? ಪಾಪ, ನಿಮ್ಮಜ್ಜಿಗೆ?"

"ಮಗುವಿಗೆ ದಿನ ಬಿಟ್ಟು ದಿನ ಜ್ವರ ಬರುತಿತ್ತು. ನಮ್ಮಜ್ಜಿಗೂ ಖಾಯಿಲೆಯಾಯಿತು. ನಾನು ಅಜ್ಜಿಯ ಶುಶ್ರೂಷೆಯಲ್ಲಿರುವಾಗ ಮಗುವಿನ ಖಾಯಿಲೆ ಹೆಚ್ಚಾಯಿತು. ಆದರೆ ಬರಿಯ ಜ್ವರ ಮಗುವನ್ನಷ್ಟು ಒಣಗಿಸಿ ಬಿಡುವುದೆಂದು ನನಗೆ ತಿಳಿದಿರಲಿಲ್ಲ. ಅಜ್ಜಿ ತೀರಿಕೊಂಡ ಸ್ವಲ್ಪ ದಿನಗಳಲ್ಲಿಯೇ ಮಗುವೂ ಕೈಬಿಟ್ಟಿತು. ಆದರೆ ಈ ಮಗನಿಗೆ ಖಾಯಿಲೆಯಾಗಿ ಇದೊಂದು ದುಃಖ ಅಂಟಿಕೊಂಡಿದೆ. ಸಾಲದುದಕ್ಕೆ ಮನೆಯೊಳಗೆ ಎದೆ

ಯುದ್ಧ ಮಗಳಿದಾಳೆ. ಅವಳದೊಂದು ಕತೆ. ನಮ್ಮ ಯಜಮಾನರು ನನ್ನನ್ನು ಬಿಟ್ಟುಬಿಟ್ಟರು. ಮಗಳ ಮದುವೆಗಾಗಿ ಬಹಳ ಹೆಣಗುತಿದೇನೆ. ವರ ಸಿಕ್ಕದು. ಹುಡುಗಿ ಚೆನ್ನಾಗಿಲ್ಲ. ಬಣ್ಣ ಕಪ್ಪು. ಎದೆ ಸೀಳಿದರೆ ಎರಡಕ್ಷರವಿಲ್ಲ. ನಾಗರಿಕತೆಯ ವಾಸನೆಯೇ ಇಲ್ಲ. ಕತ್ತೆ ದುಡಿದ ಹಾಗೆ ಮನೆಗೆಲಸ ಮಾಡಿದರೆ ಬಂತೆ? ಒಕ್ಕಲಗಿತ್ತಿಯರೂ ಕೆಲಸಮಾಡುತಾರೆ, ಎಂದು ಜನ ಏನೇನೊ ಆಡುತಾರೆ. ವರನ ತಾಯಿಗೆ ಅಂಗಲಾಚಿ ಬೇಡಿ ಕೊಂಡರೆ, ವರದಕ್ಷಿಣೆ ಕೊಡಬೇಕು, ಎನ್ನುತಾಳೆ. ಹೊಟ್ಟೆಗಿಲ್ಲದ ಹೆಣ್ಣು ಮಕ್ಕಳ ತಾಯಿ ನಾನು, ವರದಕ್ಷಿಣೆಯನ್ನೆಲ್ಲಿಂದ ತರಲಿ? ನನಗೇಕೊ ಜೀವನವೇ ಬೇಡವಾಗಿದೆ.''

" ಸೀತಮ್ಮ, ಜೀವನವೇ ಬೇಡ, ಎಂದರೆ ದೇವರು ಕೇಳುತಾನೆಯೆ? ಧೈರ್ಯ ತಂದುಕೊಳ್ಳಬೇಕು. ಎದೆಗುಂದಬಾರದಮ್ಮ. ಕಷ್ಟಕ್ಕೂ ಒಂದು ಮಿತಿಯುಂಟು. ದೇವರು ಕಣ್ಣುಬಿಡುತಾನೆ. ನಿನಗೆಲ್ಲ ಒಳ್ಳೆಯದಾಗು ತದೆ. ಸುಖ-ದುಃಖ, ಹಗಲು-ರಾತ್ರಿ ಇದ್ದ ಹಾಗೆ. ಸುಖದ ಕಾಲ ಬಂದೇ ಬರುತದೆ. ನಿನ್ನ ಮಗಳ ಮದುವೆಯ ಯೋಚನೆ ನೀನೇಕೆ ಮಾಡ್ತೀಯೆ? ನಾನು ನನ್ನ ಕೈಯಲ್ಲಾದ ಪ್ರಯತ್ನಮಾಡಿ ವರ ಹುಡುಕಿ ಕೊಡುತೇನೆ ''

" ಒಳ್ಳೆಯದು ಆದರೆ ಜನಕ್ಕೆ ಅವಸರವೊಂದಿದೆಯಲ್ಲ, ಶಾರದಮ್ಮ. ನನ್ನ ಮಗಳಿಗೆ ಹದಿನಾಲ್ಕು ಮೀರಿರುವುದರಿಂದ ಆಕೆಯೊಂದು ಹೊಲಸಂತೆ; ನಾವೆಲ್ಲ ಹೊಲಸಂತೆ. ಊರಲ್ಲೆಲ್ಲ ಅದೇ ಸುದ್ದಿ. ನಮ್ಮಜ್ಜಿಗೆ ಬೇಸರವಾಗಿ ನಮ್ಮನ್ನು ಬೇರೆ ಇಟ್ಟದ್ದಳು. ಈಗ ಅವಳೊಬ್ಬಳನ್ನು ಮನೆಯಲ್ಲಿ ಬಿಟ್ಟು ಬಂದಿದೇನೆ. ಬೇಗ ಹೋಗಬೇಕು. ನನಗೇಕೊ, ಆ ಊರಿನಲ್ಲಿರಲು ಇಷ್ಟವಿಲ್ಲ. ನನ್ನದೆಂಬ ವಸ್ತು, ನಮ್ಮಜ್ಜಿ ಅಲ್ಲಿಲ್ಲದ ಮೇಲೆ, ಆ ಹೊಳೆ ಯಾಚೆಯ ದ್ವೀಪದಲ್ಲಿ ನಮಗೇನು ಕೆಲಸ?"

" ಹೌದಮ್ಮ, ಹೆಣ್ಣುಮಕ್ಕಳನ್ನು ಹೆತ್ತವರ ಪಾಡೇ ಹಾಗೆ. ಆದರೆ ನಾನು ನನ್ನ ಬಳಗಕ್ಕೆಲ್ಲ ತಿಳಿಸಿ ಒಂದು ವರ ಹುಡುಕಿಸುತೇನೆ. ಕಾಗದ ಬರೆಯುತೇನೆ. ನಿನಗೇಕೆ ಚಿಂತೆ. ಇಂದು ನಮ್ಮ ಮನೆಗೆ ನನ್ನ ತಂಗಿಯ ಗಂಡ ಬಂದಿದಾರೆ. ಅವರು ನಮ್ಮ ಯಜಮಾನರೊಡನೆ ಎಲ್ಲಿಗೋ ಹೋಗಿ

ದಾರೆ. ಅವರು ಬಂದಮೇಲೆ ಅವರಿಗೂ ಒಂದು ಮಾತು ಹೇಳಿರೋಣ. ಎಲ್ಲಿಯಾದರೂ ವರ ಸಿಕ್ಕೇ ಸಿಕ್ಕುತಾನೆ. ದೇವರು ಹೆಣ್ಣೊಂದನ್ನು ಸೃಷ್ಟಿಸಿದಮೇಲೆ ಅದಕ್ಕೆ ಗಂಡನೊಬ್ಬನನ್ನು ಎಲ್ಲಿಯಾದರೂ ಇಟ್ಟೇ ಇರುತಾನೆ" ಎಂದ್ಧಳು.

ಶಾರದಮ್ಮನವರ ಗಂಡ, ಅವರ ಹೆಂಡತಿಯ ತಂಗಿಯ ಗಂಡನೊಡನೆ ಬಂದರು. ಎಂಟು ಗಂಟೆಯ ಸಮಯ. ಸೀತಮ್ಮ ಎದ್ದು ಒಳಗೆ ಹೋದಳು. ರಾತ್ರಿ ಊಟವಾದಮೇಲೆ ಎಲ್ಲ ಕುಳಿತುಕೊಂಡು ಬಹಳ ಹೊತ್ತು ಮಾತಾಡುತ್ತಿದ್ದರು. ಶಾರದಮ್ಮ ತನ್ನ ತಂಗಿಯ ಗಂಡನೆದುರಿಗೆ ಸೀತಮ್ಮನ ಕತೆಯನ್ನೆಲ್ಲ ತಿಳಿಸಿದಳು. ನಡುನಡುವೆ ಶಾರದಮ್ಮನವರ ಯಜಮಾನರೂ ಏನೇನೋ ಹೇಳುತ್ತಿದ್ದರು.

ಆಕೆಯ ತಂಗಿಯ ಗಂಡ ರಂಗಾಪುರದವರು. ಸೀತಮ್ಮನ ಕತೆ ಕೇಳಿ ಅವರಿಗೆ ಬಲು ದುಃಖವಾಯಿತು. ಮಗಳ ಮದುವೆಗಾಗಿ ಆಕೆ ಪಡುತ್ತಿರುವ ಕಷ್ಟದ ಪ್ರಸ್ತಾಪ ಬಂದಕೂಡಲೆ ಅವರಿಗೊಂದು ಯೋಚನೆ ಹೊಳೆಯಿತು. ಹೇಳಿದರು :

"ನಾವಿರುವ ರಂಗಾಪುರದಿಂದ ಮೂರು ಮೈಲಿ ದೂರದಲ್ಲಿ ಸುರಗಿಹಳ್ಳಿ ಎಂಬ ಊರಿದೆ. ಆ ಊರಿನಲ್ಲಿ ಮಹಾಬಲ ಶಾಸ್ತ್ರಿಗಳು ದೊಡ್ಡ ಜಮಿಾನುದಾರರು; ಸಾಹುಕಾರರು. ಆಸ್ತಿ ಚೆನ್ನಾಗಿದೆ. ಅವರು ತೀರಿಕೊಂಡು ಮೂರು ವರುಷಗಳಾದುವು. ಅವರ ಮಗ ಸೀತಾರಾಮುವೇ ಈಗ ಮನೆಯ ಯಜಮಾನ. ಮನೆಯಲ್ಲಿ ಆತ, ತಾಯಿ ಇಬ್ಬರೇ ಹುಡುಗ ಬೆಳ್ಳಗೆ ಲಕ್ಷಣವಾಗಿದಾನೆ. ಆದರೆ ಎಡಗಾಲು ಸ್ವಲ್ಪ ಕುಂಟು ; ಕೊಂಚ ಉಗ್ಗು ಮಾತಾಡುತಾನೆ. ಆತನಿಗೆ ಮದುವೆಮಾಡಲು ಒಂದು ವರುಷದಿಂದ ಅವನ ತಾಯಿ ಹೆಣ್ಣು ಹುಡುಕುತಿದಾರೆ. ಸರಿಯಾದ ಹುಡುಗಿ ಸಿಕ್ಕಿಲ್ಲ. ಆಕೆಗೆ ಬಡವರ ಮನೆಯ ಹೆಣ್ಣೇ ಬೇಕಾಗಿದೆ. ಹುಡುಗಿಗೆ ಚೆಲುವಿಲ್ಲದಿದ್ದರೂ ಚಿಂತೆಯಿಲ್ಲ ; ಗುಣ ಚೆನ್ನಾಗಿರಬೇಕು. ಆಕೆಯಿಂದ ಮನೆ ಬೆಳೆಯದಿದ್ದರೂ ಚಿಂತೆಯಿಲ್ಲ ; ಮನೆ ಅಳಿಯಬಾರದು, ಎಂದು ಅವರು ಹೇಳುತಾರೆ. ನನಗೂ ಅವರಿಗೂ ತುಂಬ ಪರಿಚಯ. ಮಹಾಬಲ ಶಾಸ್ತ್ರಿಗಳೂ ನಾನೂ ಪ್ರಾಣಸ್ನೇಹಿತರು. ನಾನು ಆಕೆಯನ್ನು

ಒಪ್ಪಿಸಿಬಿಡುತ್ತೇನೆ. ಮದುವೆ ಖಂಡಿತ. ನೀವು ಮಗಳನ್ನು ಕರೆದುಕೊಂಡು ರಂಗಾಪುರಕ್ಕೆ ಬಂದುಬಿಡಿ."

ಸೀತಮ್ಮ ಇಳಿಮನಸ್ಸಿನಿಂದ "ಅಷ್ಟು ದೊಡ್ಡ ಸಾಹುಕಾರರು, ಈ ಮಗಳನ್ನು ಒಪ್ಪುವರೆ? ಆದರೆ, ವರ ವಧುವನ್ನು ನೋಡಿದಮೇಲೆ ತಾನೇ ನಿಶ್ಚಯ? ನನ್ನ ಮಗಳು ಲಕ್ಷಣವಾಗಿಯೂ ಇಲ್ಲ. ವಿದ್ಯಾವಂತಳಾಗಿಯೂ ಇಲ್ಲ. ಆದರೆ ಮನೆಯ ಎಲ್ಲ ಕೆಲಸಗಳನ್ನೂ ಮಾಡುತ್ತಾಳೆ; ನಡತೆ ಚೆನ್ನಾಗಿದೆ, ಎಂದು ಧೈರ್ಯವಾಗಿ ಹೇಳುತ್ತೇನೆ........ಆದರೆ ಅವರು ಹೆಣ್ಣನ್ನು ನೋಡಬೇಕಲ್ಲ?" ಎಂದಳು.

"ಏನೂ ಬೇಕಿಲ್ಲ. ಅವರು ಒಪ್ಪುತ್ತಾರೆ. ಬೇಕಾದರೆ ನೀವು ನಮ್ಮ ಗಾಡಿಯೊಳಗೆ ನಾಳೆ ಸುರಗಿಹಳ್ಳಿಗೆ ಬನ್ನಿ. ನಾನು ಅವರ ಮನೆಗೆ ಕರೆದು ಕೊಂಡು ಹೋಗಿ ಮಾತಾಡುತ್ತೇನೆ. ನೀವು ಎಲ್ಲವನ್ನೂ ತಿಳಿಸಿರಿ........ ಹುಡುಗಿ ತೀರ ಅಷ್ಟು ಕುರೂಪಿಯೆ?" ಎಂದು ಶಾರದಮ್ಮನವರ ಕಡೆ ತಿರುಗಿ ನುಡಿದರು.

ಶಾರದಮ್ಮ "ಏನಿಲ್ಲ. ಹುಡುಗಿ ಸ್ವಲ್ಪ ಕಪ್ಪು, ಅಷ್ಟೆ. ಆದರೆ ಲಕ್ಷಣವಾಗಿದ್ದಾಳೆ. ಬಹಳ ಒಳ್ಳೆಯ ಹುಡುಗಿ" ಎಂದರು.

"ಹುಡುಗನಿಗೆ ಇನ್ನೂ ಇಪ್ಪತ್ತು ವರುಷ. ಚೆನ್ನಾಗಿದ್ದಾನೆ. ನೀವು ನಾಳೆ ನನ್ನೊಡನೆ ಗಾಡಿಯಲ್ಲಿ ಬನ್ನಿ. ಅವರೊಡನೆ ಮಾತಾಡೋಣ. ಒಪ್ಪಿಗೆಯಾದಮೇಲೆ ಗಾಡಿ ಕಟ್ಟಿಸಿಕೊಡುತ್ತೇನೆ. ನೀವು ಮಲ್ಲಿಗೆ ಹಳ್ಳಿಗೆ ಹೋಗಿ, ಹುಡುಗಿ, ಮಕ್ಕಳನ್ನು ಕರೆದುಕೊಂಡು ಬನ್ನಿ. ಮದುವೆಯಾದ ಮೇಲೆ ನೀವೆಲ್ಲರೂ ಸುಖವಾಗಿ ಅವರ ಮನೆಯಲ್ಲಿಯೇ ಇರಬಹುದು. ಮಹಾಬಲಶಾಸ್ತ್ರಿಗಳ ಹೆಂಡತಿ ಮಡಿಹೆಂಗಸು; ಬಹಳ ಒಳ್ಳೆಯವರು. ಅವರು ನಿಮ್ಮ ಕತೆ ಕೇಳಿದರಂತೂ ತುಂಬ ಕನಿಕರ ಪಡುತ್ತಾರೆ. ನಾಳೆ ಹೊರಡೋಣ" ಎಂದರು.

ಎಲ್ಲ ಮಲಗಿಕೊಂಡರು. ಆದರೆ ಸೀತಮ್ಮನಿಗೆ ನಿದ್ದೆ ಬರಲಿಲ್ಲ. "ಖಾಯಿಲೆ ಬಿದ್ದಿರುವ ಮಗನ ಮುಖ ನೋಡಲಿಲ್ಲ. ಹೇಗಿದ್ದಾನೊ ಏನೊ ತಿಳಿಯದು. ಅವರ ಮಾತಿನಲ್ಲಿ ನನಗೆ ಪೂರ್ಣ ನಂಬಿಕೆಯಿದೆ; ನಾನು ಅವರನ್ನೇ ನಂಬಿದ್ದೇನೆ. ಆದುದರಿಂದ ನನ್ನ ಕಂದನಿಗೆ ತೊಂದರೆಯಿಲ್ಲ.

ದೇವರ ದಯೆಯಿಂದ ಖಾಯಿಲೆ ವಾಸಿಯಾಗುತದೆ. ಅವನು ಮನೆ ಬೆಳಗಿ ಸುವ ಸೂರ್ಯ ; ನೆಮ್ಮದಿ ತರುವ ಮೊಮ್ಮಗ ....ಅವನ ಹಂಬಲಿನಲ್ಲಿಯೇ ನಾನಿದ್ದರೆ ಎಣ್ಣೆ ಬಂದಾಗ ಕಣ್ಣುಮುಚ್ಚಿಕೊಂಡಂತಾಗುತದೆ. ಈಗೊಂದು ಸುಯೋಗ ಒದಗಿದೆ. ಈ ಪ್ರಯತ್ನದಿಂದ ಮದುವೆ ನಿಶ್ಚಯವಾದರೆ ನನ ಗೊಂದು ಭಾಗ್ಯ ಬಂದಂತೆ. ಮದುವೆಯ ವೇಳೆಗೆ ಅವನಿಗೂ ವಾಸಿಯಾಗಿರು ತದೆ. ಅಕ್ಕನ ಮದುವೆಯ ಸುದ್ದಿ ಕೇಳಿದರೆ ಅವನಿಗೆ ತುಂಬ ಆನಂದ ಈಗ ಅವನಿಗೆ ಖಾಯಿಲೆ. ನಿಜ. ಆದರೆ ವಾಸಿಯಾಗುತಿದೆಯಲ್ಲ? ಕೆಟ್ಟ ದನ್ನೇ ಯೋಚಿಸುವುದು ಶುದ್ಧ ತಪ್ಪು. ದೇವರು ಅಂಥ ಕೆಡುಕನಲ್ಲ; ಬುದ್ಧಿಗೇಡಿಯಲ್ಲ. ನಾನೊಂದು ಶುಭ ಕಾರ್ಯದಲ್ಲಿ ತೊಡಗುವವಳು. ಹಿಂದೇಟು ಹಾಕಬಾರದು .. ...ಜನ ಏನೆಂದಾರು, ಎಂಬ ಹೆದರಿಕೆಯೆ? ... ಜನರಿಗೇನು ಗೊತ್ತು ! ನನ್ನ ಕಂದನಿಗೆ ವಾಸಿಯಾಗಿ ಅವನು ಮದುವೆಗೆ ಬರುತಾನೆ. ಲಲಿತ ನನಗೆ ಮಗಳಲ್ಲವೆ? ಅವಳ ಮತ್ತು ನನ್ನ ಸುದೈವ ; ಈಗೊಂದು ದಾರಿ ಕಾಣುತಿದೆ. ದೇವರನ್ನು ಪರೀಕ್ಷೆ ಮಾಡುವ ಸಮಯ ; ನೊಡೋಣ.......ರಾಜು ಹುಷಾರಾಗಿ ಮದುವೆಗೆ ಬರುತಾನೆ.. ..." ಎಂದು ಮನಸ್ಸಿನೊಡನೆ ಏನೇನೊ ಮಾತಾಡಿ ಮಗನ ಖಾಯಿಲೆ ಮರೆತು, ಮಗಳ ಮದುವೆ ನೆನಸಿಕೊಂಡಳು.

ಬೆಳಗಾಯಿತು. ಬೆಳಗ್ಗೆ ಎಂಟು ಗಂಟೆಯೊಳಗಾಗಿ ತಿಂಡಿ ಕಾಫಿ, ತೆಗೆದುಕೊಂಡು ಗಾಡಿಯಲ್ಲಿ ಸುರಗಿಹಳ್ಳಿಗೆ ಹೊರಟುಬಿಟ್ಟರು. "ಶಾರದಮ್ಮ ನೀವೂ ಜೊತೆಗೆ ಬನ್ನಿ" ಎಂದು ಸೀತಮ್ಮ ಕರೆದುದಕ್ಕೆ ಶಾರದಮ್ಮ "ಮದುವೆಗೆ ಬರುತೇನಮ್ಮ. ಈಗ ಅವರಿಗೆ ಅನನುಕೂಲವಾಗುತದೆ" ಎಂದು ಹೇಳಿದರು. ಗಾಡಿ ಹೊರಟಿತು.

ಇಪ್ಪತ್ತು ಮೈಲಿ ದೂರವಾದರೂ ಬಲು ಬೇಗ ಸುರಗಿಹಳ್ಳಿಯನ್ನು ಸೇರಿದರು. ಊರಿಗೆಲ್ಲ ಮಹಾಬಲ ಶಾಸ್ತ್ರಿಗಳದೇ ದೊಡ್ಡಮನೆ. ಮೂರು ಅಂತಸ್ತಿನದು. ಎರಡು ಭವಂತಿಯ ಮನೆ. ಬಹಳ ಪುರಾತನ ಕಟ್ಟಡ ವಾದರೂ ಇನ್ನೂ ನೂರು ವರುಷ ಗಟ್ಟಿಮುಟ್ಟಾಗಿ ಬಾಳಬಲ್ಲದು. ಸುತ್ತ ದೊಡ್ಡ ತೋಟ. ತೋಟದ ನಡುವೆ ಒಂದು ಸಣ್ಣ ಇಳಿಯುವ ಬಾವಿ; ಬೇಸಗೆಯಲ್ಲಿ ಗಿಡಗಳಿಗೆ ನೀರು ಹಾಯಿಸಲು ತೋಡಿಸಿದಾರೆ. ಅದಕ್ಕೆ

ಸುತ್ತುಕಟ್ಟೆಹಾಕಿ, ಇಳಿಯುವುದಕ್ಕೆ ಮೆಟ್ಟಲು ಕಟ್ಟಿಸಿದಾರೆ. ತೋಟದ ತುಂಬ ಹೂ ತುಂಬಿ ಬಾಗಿ ಬಳುಕುವ ಗಿಡಗಳು. ಹಿಂದೆ ಹಣ್ಣು ತರಕಾರಿಯ ಗಿಡಗಳು. ಮನೆಯೊಳಗೆ ನೂರು ಜನ ಸುಖವಾಗಿ ವಾಸಿಸಬಹುದು. ಎರಡು ಭವಂತಿಗಳ ಕೈಸಾಲೆಯಲ್ಲಿ ಸಾವಿರ ಎಲೆ ಹಾಕಬಹುದು. ಎರಡ ನೆಯ ಭವಂತಿಯ ನಡುವೆ ಸಿಹಿನೀರಿನ ಒಂದು ಬಾವಿ. ಪೂರ್ವಕಾಲದ ಮನೆಯಾದರೂ ಒಳಗೆ ಗಾಳಿ ಬೆಳಕು ಚೆನ್ನಾಗಿದೆ. ಮನೆಗೆ ಸ್ವಲ್ಪ ದೂರ ದಲ್ಲಿಯೇ ಮಕ್ಕಳ ಪಾಠಶಾಲೆ. ಶಾಲೆಗೆ ಬಲಗಡೆ ಊರು ಬೆಳೆದಿದೆ. ಎರಡು ಸಾಲುಮನೆ, ಅರಳಿಕಟ್ಟೆ, ಆಂಜನೇಯನ ಗುಡಿ ಎಲ್ಲ ಅಲ್ಲಿವೆ. ಮಹಾಬಲ ಶಾಸ್ತ್ರಿಗಳು, ಮುರಿದುಹೋಗಿದ್ದ ಆಂಜನೇಯನ ಗುಡಿಯನ್ನು ಸರಿಯಾಗಿ ಕಟ್ಟಿಸಿ ಜೀರ್ಣೋದ್ಧಾರ ಮಾಡಿದರು; ಮಕ್ಕಳಿಗಾಗಿ ಮೂರು ಸಾವಿರ ರೂಪಾಯಿ ಖರ್ಚುಮಾಡಿ ಶಾಲೆಯ ಕಟ್ಟಡ ಕಟ್ಟಿಸಿಕೊಟ್ಟರು. ಗಾಡಿ ಅವರ ಮನೆಯ ಮುಂದೆ ನಿಂತಿತು.

ಸೀತಾರಾಮುವಿನ ತಾಯಿ ಕೈಸಾಲೆಯಲ್ಲಿ ಮಣೆಯಮೇಲೆ ಕುಳಿತು, ಹೂಬತ್ತಿ ಮಾಡುತ್ತಿದ್ದರು. ಉಪಾಧ್ಯಾಯರ ಮಗ ಅನಂತು, "ಸಾವಿತ್ರಿ ಚರಿತ್ರೆ" ಓದುತ್ತಿದ್ದ. ಗಾಡಿ ನಿಂತ ಕೂಡಲೆ ಆಕೆಯ ದೃಷ್ಟಿ ಬೀದಿಯ ಕಡೆ ಬಿದ್ದು, ಹತ್ತಿಯ ಬುಟ್ಟಿಯನ್ನಲ್ಲಿಯೆ ಬಿಟ್ಟು ಗಾಡಿಯೆಡೆ ಬಂದಳು. ಅನಂತು ಮನೆಗೆ ಹೊರಟುಹೋದ. ಸೀತಾರಾಮು ಮನೆಯಲ್ಲಿರಲಿಲ್ಲ. ಗಾಡಿಯಿಂದಿಳಿದ ಶಾರದಮ್ಮನವರ ತಂಗಿಯ ಗಂಡನನ್ನೂ ಸೀತಮ್ಮನನ್ನೂ ಕರೆದುಕೊಂಡು ಪಡಸಾಲೆಗೆ ಬಂದಳು. ಆತ ಸೀತಮ್ಮನ ಕಥೆಯನ್ನೆಲ್ಲಾ ತಿಳಿಸಿದರು. "ಈ ಬಡ ಹೆಣ್ಣುಮಗಳಿಗೆ ನೀವು ಬಹಳ ಸಹಾಯ ಮಾಡಿ ದಂತಾಗುತದೆ" ಎಂದು ಎರಡು ಮೂರು ಬಾರಿ ಆಗಾಗ ಹೇಳಿದರು.

ಸೀತಾರಾಮುವಿನ ತಾಯಿ "ಅಯ್ಯೋ ಅದೇನು ದೊಡ್ಡ ವಿಷಯ. ನಾವೇನು ಮಹಾ ಉಪಕಾರ ಮಾಡಿದಂತಾಗುತದೆ. ದೇವರು ಹಣೆಯಲ್ಲಿ ಬರೆದ ಹಾಗೆ ನಡೆಯುವುದು. ಮನೆಗೆ ಬಂದ ಲಕ್ಷ್ಮಿಯನ್ನು ಹೊರದೂಡು ವರೆ? ನೀವು ಕರೆದುಕೊಂಡು ಬಂದಿದೀರಿ. ಹೆಣ್ಣು ಕಪ್ಪಾದ ಮಾತ್ರಕ್ಕೆ ನಮಗೇನು ಕುಂದುಂಟಾಗುತದೆ? ಬಣ್ಣದೊಳಗೇನಿದೆ! ನಾನು ಒಪ್ಪಿದೇನೆ. ನನ್ನ ಹುಡುಗನೂ ಒಪ್ಪುತಾನೆ. ನನ್ನ ಒಪ್ಪಿಗೆಯಾದ ಮೇಲೆ ಅವನೂ

ಒಪ್ಪಿದಂತೆಯೆ. ಜಾತಕ ನೋಡಿಸುವ ಪದ್ಧತಿಯಿದ್ದರೆ, ನೀವು ಜಾತಕ ಕಳಿಸಿ. ಇಲ್ಲದಿದ್ದರೆ ಗಾಡಿ ಕಟ್ಟಿಸಿಕೊಡುತ್ತೇನೆ. ಊರಿಗೆ ಹೋಗಿ ಎಲ್ಲರನ್ನೂ ಇಲ್ಲಿಗೆ ಕರೆದುಕೊಂಡು ಬಂದುಬಿಡಿ. ನಾನು ಅಷ್ಟು ಹೊತ್ತಿಗೆ ಮುಹೂರ್ತ ಇಡಿಸುತ್ತೇನೆ. ಏನು ಬೇಕಾದರೂ, ಯಾವುದಕ್ಕೂ ದೇವರು ನನಗೆ ಕೊರತೆ ಕೊಟ್ಟಿಲ್ಲ. ಎಲ್ಲವೂ ಬೇಗ ಸಿದ್ಧವಾಗಿಬಿಡುತ್ತದೆ. ನೀವು ನಾಳೆ ಬೆಳಗ್ಗೆಯೇ ಊಟಮಾಡಿಕೊಂಡು ಗಾಡಿ ಕಟ್ಟಿಸಿಕೊಂಡು ಹೋಗಿ ಬನ್ನಿ" ಎಂದರು.

ಸೀತಮ್ಮನಿಗೆ ಬಹಳ ಆನಂದವಾಯಿತು, "ಜಾತಕ ನೋಡಿಸಲೇ ಬೇಕೆಂಬ ಪದ್ಧತಿಯಿಲ್ಲ. ಅದರಿಂದ ಸುಮ್ಮನೆ ಕಾಲಹರಣ. ಕೆಲಸಕ್ಕೆ ಬಾರದ ಚರ್ಚೆ. ನಾನು ಊರಿಗೆ ಹೋಗಿ ಎಲ್ಲರನ್ನೂ ಕರೆದುಕೊಂಡು ಬಂದು ಬಿಡುತ್ತೇನೆ" ಎಂದು ಹರುಷದಿಂದ ತಿಳಿಸಿದಳು. ಸಂಜೆ, ಮಗ ಮನೆಗೆ ಬಂದ. ಎಲ್ಲ ವಿಷಯವನ್ನೂ ತಾಯಿ ಅತನಿಗೆ ಹೇಳಿದಳು. ಆತ ಒಪ್ಪಿದ. ರಾತ್ರಿ ಊಟಮಾಡಿ ಎಲ್ಲರೂ ಮಲಗಿಕೊಂಡರು. ಸೀತಮ್ಮನಿಗೆ ಬಲು ಆನಂದ. ಆ ಸಂತೋಷದೊಳಗೆ ಮಗನ ಖಾಯಿಲೆ ಮರೆತಳು. ನಿದ್ದೆ ಹೇಗೆ ಮಾಡುವುದೆಂಬುದೂ ಮರೆತುಹೋಯಿತು. ಎಂದಿಗೆ ಬೆಳಕು ಹರಿದೀತೊ, ಎಂದು ಕಾದಿದ್ದಳು.

ಬೆಳಗ್ಗೆ ಒಂಬತ್ತು ಗಂಟೆಯೊಳಗಾಗಿ ಊಟವಾಯಿತು. ಶಾರದಮ್ಮನವರ ತಂಗಿಯ ಗಂಡ, ರಂಗಾಪುರಕ್ಕೆ ಹೋಗಿ ಪುನಃ ನಾಳೆ ಬಂದು ಬಿಡುತ್ತೇನೆ, ಎಂದು ಮೂವರಿಗೂ ತಿಳಿಸಿ ಹೊರಟರು. ಗಾಡಿ ಕಟ್ಟಿದ್ದಾಯಿತು. ಸೀತಮ್ಮ ಕುಂಕುಮ ಹಚ್ಚಿಕೊಂಡು, ಹೋಗಿ ಬರುತ್ತೇನೆಂದು ಮುದುಕಿಗೆ ತಿಳಿಸಿ ಗಾಡಿಯಲ್ಲಿ ಕುಳಿತಳು. ಜೊತೆಯಲ್ಲಿ ಪುರೋಹಿತ ರಾಮಾಶಾಸ್ತ್ರಿಗಳ ಹಿರಿಯ ಮಗ ಹೊರಟ. ದೊಡ್ಡ ಗಾಡಿ; ತುಂಬ ಅನುಕೂಲವಾಗಿತ್ತು. ಮೈ ತುಂಬಿದ ದೊಡ್ಡ ಜೊತೆ ಎತ್ತುಗಳು ಮಿಂಚಿನಂತೆ ಓಡಿದುವು.

ಬಹಳ ದೂರವಾದರೂ ಬಲು ಬೇಗ ಗುಡ್ಡದಪುರವನ್ನು ಸೇರಿದರು. ಗಾಡಿಯನ್ನು ಅಲ್ಲಿ ಬಿಟ್ಟು, ಮೊಳಕಾಲುದ್ದ ನೀರಿದ್ದ ಹೊಳೆಯನ್ನು ಮೂವರೂ ದಾಟಿ ಮಲ್ಲಿಗೆಹಳ್ಳಿಯನ್ನು ಸೇರಿದರು.

ಒಳಗೆ, ಲಲಿತ ಶಾರದೆಗೆ ಅನ್ನ ಬಡಿಸುತ್ತಿದ್ದಳು. ಸೀತಮ್ಮ "ಲಲಿತಾ"

ಎಂದು ಒಳಕ್ಕೆ ಹೋದಳು. ಗಾಡಿಯವನು ಜಗಲಿಯ ಮೇಲೆ ವಿಶ್ರಮಿಸುತ್ತ ಕುಳಿತುಕೊಂಡ. ಲಲಿತ ತಾಯಿಯ ಧ್ವನಿ ಕೇಳಿ, ಬೇಗ ಓಡಿಬಂದಳು. ಊಟಮಾಡುತ್ತಿದ್ದ ಶಾರದೆಯೂ ಎದ್ದು ಬಂದುಬಿಟ್ಟಳು. ಎಳೆಮಗು ಮಲಗಿ ನಿದ್ರಿಸುತ್ತಿತ್ತು. ಪಡಸಾಲೆಯ ಮೂಲೆಯಲ್ಲಿದ್ದ ಚಾಪೆಯನ್ನು ಹಾಸಿ, ಸೀತಮ್ಮ "ಬನ್ನಿ, ಕುಳಿತುಕೊಳ್ಳಿ" ಎಂದು ಶಾಸ್ತ್ರಿಗಳ ಮಗನಿಗೆ ತಿಳಿಸಿದಳು. ಆಮೇಲೆ ಮಗಳಿಗೆ ಎಲ್ಲ ವಿಷಯ ತಿಳಿಯಿತು. ಮೊದಲು ಎರಡು ಬಟ್ಟಲು ಕಾಫಿ ಮಾಡಿಕೊಟ್ಟಳು. ಆಮೇಲೆ ಬೇಗ ಅನ್ನ ಕ್ಕಿಟ್ಟಳು. ತಾಯಿಯ ಮೇಲಿದ್ದ ತನ್ನ ಹೊರೆ ತೀರಿತಲ್ಲಾ, ಎಂದು ಹುಡುಗಿಗೆ ಆನಂದ. ಒಳಗೊಳಗೇ ಸಂತೋಷ ಪಡುತ್ತಿದ್ದಳು. ಮಾರನೆಯ ದಿನವೇ ಊರಿಗೆ ಹೊರಡುವ ನಿಶ್ಚಯವಾಯಿತು.

ಊಟವಾದಮೇಲೆ ಸಾಮಾನುಗಳನ್ನೆಲ್ಲ ಕಟ್ಟಿದ್ದಾಯಿತು. "ಮುದುಕಿ ಕೆಟ್ಟ ನಕ್ಷತ್ರದಲ್ಲಿ ತೀರಿಕೊಂಡಿರುವುದರಿಂದ ಬಾಡಿಗೆಗೆ ಯಾರೂ ಬಂದಿಲ್ಲ. ನಾವೂ ನಾಳೆ ಈ ಊರನ್ನು ಬಿಟ್ಟು ಸುರಗಿಹಳ್ಳಿಗೆ ಹೊರಟುಹೋಗುತೇವೆ. ಮನೆಯನ್ನು ಖಾಲಿ ಮಾಡಿ ಬೀಗದ ಕೈಗಳನ್ನು ಪಕ್ಕದ ಮನೆಯ ಹನುಮಂತರಾಯರ ಕೈಯಲ್ಲಿ ಕೊಟ್ಟಿದೆ" ಎಂದು ಬೆಂಗಳೂರಿನ ನಾರಾಯಣ ಸ್ವಾಮಿಗೊಂದು ಪತ್ರ ಬರಸಿ ಹಾಕಿಸಿದಳು. ಸಂಜೆ, ಊರಿನಲ್ಲಿ ಹೇಳಬೇಕಾದವರೆಲ್ಲರಿಗೂ ಹೇಳಿ, ಕೊಡಬೇಕಾದ ಸಾಲವನ್ನೆಲ್ಲ ತೀರಿಸಿ ಜಯಲಕ್ಷ್ಮಿಯನ್ನು ನೋಡಲು ಸೀತಮ್ಮ ಹೋದಳು. ಜಯಲಕ್ಷ್ಮಿ ಆಕೆಗೆ ಬಲು ಸಹಾಯ ಮಾಡಿದ್ದಳು. ಆಕೆಗೆ ಎಲ್ಲ ವಿಷಯಗಳನ್ನೂ ಕೇಳಿ ಆನಂದವಾಯಿತು. ತಟ್ಟೆ ತುಂಬ ಎಲೆಅಡಕೆ, ತೆಂಗಿನಕಾಯಿ, ಬಾಳೆಹಣ್ಣು, ಕಲ್ಲುಸಕ್ಕರೆ ಮುಂತಾದುವುಗಳನ್ನಿಟ್ಟು ಸೀತಮ್ಮನಿಗೆ ಸಂತೋಷದಿಂದ ಉಡುಗೊರೆ ಕೊಟ್ಟಳು. ಅದೇನೊ ಇದ್ದಕ್ಕಿದ್ದಂತೆ ದುಃಖ ಬಂದು ಬಿಟ್ಟಿತು. ಕಣ್ಣು ತುಂಬ ನೀರು ತುಂಬಿತು. ಅತ್ತುಬಿಟ್ಟಳು. ಸೀತಮ್ಮನಿಗೂ ಅಳು ಬಂದು ಬಿಟ್ಟಿತು. ಜಯಲಕ್ಷ್ಮಿ ಸಮಾಧಾನಪಟ್ಟುಕೊಂಡು, ಲಲಿತಳ ಅದೃಷ್ಟಕ್ಕೆ ಆಕೆಯನ್ನು ಕೊಂಡಾಡಿದಳು. "ಮುಂದೆ ಒಳ್ಳೆಹೆಸರು ಪಡೆದು ಸುಖವಾಗಿ ಬಾಳಮ್ಮ" ಎಂದು ಹರಸಿದಳು. ಕೇವಲ ಕೆಲವು ತಿಂಗಳ ಸ್ನೇಹವಾದರೂ ಬಲು ಬಲವಾಗಿತ್ತು. ಅಗಲುವಾಗ ಜಯಲಕ್ಷ್ಮಿಗೆ ಬಹಳ ಕಷ್ಟವಾಯಿತು.

ಸೀತಮ್ಮ ತಾನಿತ್ತ ಕಷ್ಟಗಳನ್ನೆಲ್ಲ ಮರೆತು, ತನ್ನನ್ನು ಮಾತ್ರ ಮರೆಯಬಾರದೆಂದು ಬೇಡಿಕೊಂಡಳು. ಬೆಳಗಿನ ಜಾವವೇ ಸಾಮಾನಿನೊಡನೆ ಊರು ಬಿಟ್ಟು ಗುಡ್ಡದಪುರಕ್ಕೆ ಬಂದು, ಅಲ್ಲಿ ಮನೆಯ ಮುಂದೆ ನಸುಕಿನಲ್ಲೆದ್ದು ಕಸ ಗುಡಿಸುತ್ತಿದ್ದ ರಾಮಜ್ಜನ ಮಗಳಿಗೆ ಎಲ್ಲ ವಿಷಯಗಳನ್ನೂ ತಿಳಿಸಿದಳು. ರಾಮಜ್ಜನ ಮಗಳು ತನ್ನನ್ನು ಮರೆಯಬಾರದೆಂದು ಕೇಳಿಕೊಂಡಳು. ಗಾಡಿ ಹೊರಟಿತು.

ಬೇಗ ಸುರಗಿಹಳ್ಳಿಯನ್ನು ಸೇರಿತು. ಆಗ ಬೆಳಕು ಹರಿಯುತ್ತಿತ್ತು. ಮನೆಯ ಮುಂದೆ ಅಂಗಳದಲ್ಲಿ ರಾಸಿ ಅಡಕೆಯ ಮರಗಳು ಬಂದು ಬಿದ್ದಿದ್ದುವು. ಮನೆಗೆ ಸುಣ್ಣ ಹಚ್ಚಿ ಮುಗಿಸಿದ್ದರು. ಗಾಡಿ ಬಾಗಿಲಿಗೆ ಬಂದು ಸೇರಿತು. ಸೀತಾರಾಮುವಿನ ತಾಯಿ ಆಗಲೆ ಎದ್ದು, ಒಳಗೆ ಏನೊ ಕೆಲಸ ಮಾಡುತ್ತಿದ್ದರು. ಅವರಿಗೆ ಇವರೆಲ್ಲ ಬಹುಶಃ ಈಗಲೇ ಬರಬಹುದೆಂದು ಗೊತ್ತಾಗಿತ್ತು. ಉಪ್ಪಿಟ್ಟು ಕಾಫಿ ಮಾಡಿಸಿಬಿಟ್ಟಿದ್ದರು. ವರನ ತಾಯಿಗೆ ವಧುವನ್ನು ನೋಡುವ ಕುತೂಹಲ ತುಂಬ. ಆದುದರಿಂದ ಗಾಡಿಯಿಂದ ಒಬ್ಬೊಬ್ಬರಾಗಿ ಇಳಿಯುತ್ತಿರುವಾಗಲೆ ಆಕೆ ಓಡಿ ಬಂದು ಆಸಕ್ತಿಯಿಂದ ನೋಡಿದಳು. ಹುಡುಗಿಯ ಮುಖ ನೋಡಿದ ಮೇಲೆ ಮನಸ್ಸಿಗೆ ಹರುಷವಾಯಿತು. ಎಲ್ಲರೂ ಒಳಗೆ ಬಂದರು. ತಿಂಡಿ ಕಾಫಿ ಮುಗಿಯಿತು. ಮನೆಯ ಒಂದು ಭಾಗವನ್ನೇ ಸೀತಮ್ಮನಿಗೆ ಬಿಟ್ಟು ಕೊಟ್ಟಿದ್ದರು. ಹೆಸರಿಗೆ ಆ ಭಾಗ ಹೆಣ್ಣಿನವರ ಮನೆ. ಆದರೆ ಊಟ ತಿಂಡಿ ಎಲ್ಲ ಒಂದೇ ಕಡೆ. ಒಂದೇ ಮನೆಯವರಂತೆ ಹೊಂದಿಕೊಂಡರು. ವರನ ತಾಯಿ "ಇನ್ನೂ ಒಂದು ವಾರ ಅವಕಾಶವಿದೆ. ಮುಂದಿನ ಭಾನುವಾರವೇ ಧಾರೆ" ಎಂದು ಆನಂದದಿಂದ ತಿಳಿಸಿದಳು. ಸೀತಮ್ಮನಿಗೆ ಬಹಳ ಸಂತೋಷ. ಕೆಲಸಗಾರರು ಬೆಳಗಿನಿಂದ ಸಂಜೆಯವರೆಗೆ ಚಪ್ಪರ ಹಾಕುವುದು, ಮನೆಗೆ ಸುಣ್ಣ, ಬಣ್ಣ ಮುಂತಾದ ಶೃಂಗಾರದಲ್ಲಿದ್ದರು. ಪ್ರತಿದಿನವೂ ವರನ ಕಡೆಯ ಬಳಗದವರು ಯಾವ ಯಾವುದೊ ಊರಿಂದ ಬರುತ್ತಲೇ ಇದ್ದರು.

ಸೀತಮ್ಮನಿಗೆ ಎರಡು ಪತ್ರ ಬರಸಬೇಕೆನ್ನಿಸಿತು. ತನ್ನ ತಮ್ಮನ ಹೆಂಡತಿ, ತಂದೆ, ಮಲತಾಯಿ, ಎಲ್ಲರೂ ಲಗ್ನಕ್ಕೆ ಬರಬೇಕೆಂದು ತವರು ಮನೆಗೊಂದು ಪತ್ರ ಬರಸಿದಳು. ಅತ್ತೆ ಮಾವ, ಹೊಸ ಹೆಂಡತಿಯೊಡನೆ

ಯಜಮಾನರು ಮಗ ರಾಜುವನ್ನು ಕರೆದುಕೊಂಡು ಮದುವೆಗೆ ಬರಬೇಕೆಂದು ಪತ್ರ ಹೋಯಿತು. ಆದರೆ ಆರುದಿನಗಳಾದರೂ ಯಾರಿಂದಲೂ ಉತ್ತರವೇ ಬರಲಿಲ್ಲ. ಎರಡು ಊರಿಗೂ ಅಂಚೆ ತಲಪಿ ಉತ್ತರ ಬರಲು ಅಷ್ಟು ಅವಕಾಶದ ಅಗತ್ಯವಿರಲಿಲ್ಲ. ಸೀತಮ್ಮನ ಆಸೆ ನಿರಾಸೆಯಾಯಿತು. ಅವರೆಲ್ಲರ ಕಣ್ಣೆದುರಿಗೆ ಮದುವೆ ನಡಸಬೇಕೆಂಬ ಬಯಕೆ ಬಹಳ. ಆದರೆ ಅವರೆಲ್ಲ ಜೀವದಿಂದಿದ್ದರೂ ಪರದೇಶಿಯ ಲಗ್ನದಂತೆ ತಾನು ದೂರದಲ್ಲಿ ಒಬ್ಬಂಟಿಗಳಾಗಿ ನಿಂತು ಮದುವೆ ಮಾಡಿಸಬೇಕಾಯಿತಲ್ಲ, ಎಂದು ಮನಸ್ಸು ನೊಂದಿತು. ಏನು ಮಾಡುವುದಕ್ಕಾಗುತ್ತದೆ. ಬರಲು ಅವರಾರಿಗೂ ಇಷ್ಟವಿಲ್ಲವೊ, ಏನೊ.

ಚಪ್ಪರ ಶೃಂಗಾರವಾಗಿತ್ತು. ಮಾವಿನೆಲೆಯ ತೋರಣ ತೂಗಿ ನಿಲ್ಲುತ್ತಿದ್ದುವು. ಲಗ್ನ ಮಂಟಪವೂ ಸಿದ್ಧವಾಗುತ್ತಿತ್ತು. ಎಲ್ಲ ಖರ್ಚು ಗಂಡಿನ ಮನೆಯವರದು ರಂಗಾಪುರದಿಂದ ಉತ್ತಮ ಓಲಗ ಬಂದಿತ್ತು. ಬೆಂಗಳೂರಿಂದಲೂ ಒಬ್ಬಿಬ್ಬರು ವರನ ಕಡೆಯವರು ಬಂದರು. ದೊಡ್ಡ ಸಾಹುಕಾರರ ಮದುವೆ. ವಿಜೃಂಭಣೆಯಿಂದ ನಡೆಯುವುದು ಅಗತ್ಯ. ಮಾರನೆಯ ದಿನವೇ ದೇವರ ಸಮಾರಾಧನೆ, ಎದುರುಗೊಳ್ಳುವುದು. ಮನೆಯಲ್ಲಿ ಸಂಭ್ರಮ ಹೇಳತೀರದು.

ಸೀತಾರಾಮುವಿನ ತಾಯಿ ವಿಧವೆ. ಆದುದರಿಂದ ವರನ ಚಿಕ್ಕಪ್ಪ ಚಿಕ್ಕಮ್ಮ ಧಾರೆ ಎರಸಿಕೊಳ್ಳುವುದೆಂದು ನಿಶ್ಚಯಿಸಿದ್ದರು.

ವರನ ಬಳಗದವರ ಬಣ್ಣ ಬಣ್ಣದ, ಹೂ ತುಂಬಿದ ಜರಿಯ ಸೀರೆಗಳನ್ನು ನೋಡಿ ನೋಡಿ ಊರಿನ ಕಣ್ಣಿಗೆ ಬೇಸರವಾಯಿತು ; ಅಜೀರ್ಣವಾಯಿತು.

ಸೀತಮ್ಮ ಎಲ್ಲಿ ಹೋದರೂ ದುಃಖ ಅವಳ ಕೈ ಬಿಡದು. ಧಾರೆಂುರೆಯುವವರಾರೆಂಬ ಪ್ರಶ್ನೆ ಮುಂದೆ ನಿಂತಾಗ ದಿಕ್ಕು ತೋಚದೆ ಒಳಗೊಳಗೇ ಸಂಕಟ ಪಡುತ್ತಿದ್ದಳು. ಈ ವಿಷಯ ಸೀತಾರಾಮುವಿನ ತಾಯಿಗೆ ಗೊತ್ತು. ಸೀತಮ್ಮ, ತನ್ನ ಯಜಮಾನರು ಹೊಸಹೆಂಡತಿಯೊಡನೆ ಬರಬಹುದು, ಇಲ್ಲವಾದರೆ ತಂದೆ ಮಲತಾಯಿಯಾದರೂ ಬರಬಹುದು, ಎಂದು ಶನಿವಾರದ ಸಂಜೆಯುವರೆಗೂ ನಿರೀಕ್ಷಿಸುತ್ತಿದ್ದಳು. ಆದರೆ ನಿರಾಸೆಯಾಯಿತು.

ಸಹಿಸದ ಸೀತಮ್ಮ, ತಾನು ಹತ್ತಿರದಲ್ಲಿಯೇ ಇದ್ದ ಗೊಲ್ಲಹಳ್ಳಿಯಲ್ಲಿ ಜೀವಿ
ಸಲು ನಿಶ್ಚಯಿಸಿದಳು. ಹೊರಡುವ ದಿನವೂ ಗೊತ್ತಾಯಿತು.

ಊರು ಬಿಡುವ ಹಿಂದಿನ ದಿನ ಸೀತಾರಾಮು ಅತ್ತಿಗೆ ಬಹಳ
ಹೇಳಿದ. "ನೀವು ಹೋಗಬೇಡಿ. ಈ ಎರಡು ಮಕ್ಕಳೊಡನೆ ನಮ್ಮ
ಮನೆಯಲ್ಲಿಯೇ ಸುಖವಾಗಿರಿ. ಒಂಟಿಯಾಗಿದ್ದು ಸಂಸಾರ ಸಾಗಿಸುವ
ಕಷ್ಟವನ್ನೇಕೆ ಬಯಸುತೀರಿ. ನಮ್ಮ ಮನೆಯಲ್ಲಿಯೂ ಮಕ್ಕಳಾಡಿಲ್ಲ.
ಈ ನಿಮ್ಮ ಎರಡು ಮಕ್ಕಳು ನಮ್ಮ ಮನೆಗೆ ನಂದಾದೀಪದಂತಿವೆ. ದಯ
ವಿಟ್ಟು ನೀವು ಇಲ್ಲಿಯೇ ಇದ್ದುಬಿಡಿ" ಎಂದು ಬೇಡಿಕೊಂಡ.

ಆದರೆ ಇನ್ನೊಬ್ಬರಿಗೆ ತೊಂದರೆ ಕೊಡಬೇಕೆಂದರೆ ಆಕೆಗೆ ಪ್ರಾಣ
ಸಂಕಟ. "ಇಲ್ಲ, ನನಗೇನೂ ಕಷ್ಟವಿಲ್ಲ. ಅಭ್ಯಾಸವಾಗಿಬಿಟ್ಟಿದೆ. ನೀವು
ನನಗೆ ದೊಡ್ಡ ಉಪಕಾರಮಾಡಿದೀರಿ. ಮಗಳನ್ನು ಮನೆಗೆ ಕರೆದುಕೊಂಡು
ನನ್ನ ಮೇಲಿದ್ದ ಹೊರೆಯನ್ನಿಳಿಸಿದೀರಿ. ಇನ್ನು ನಾನು ನಿಮಗೆ ಹೆಚ್ಚು
ತೊಂದರೆ ಕೊಡಲಾರೆ" ಎಂದಳು.

"ನಿನ್ನಿಂದ ನಮಗೇನೂ ತೊಂದರೆಯಿಲ್ಲ, ಸೀತಮ್ಮ. ನಮ್ಮ ಮನೆ
ಯಲ್ಲಿ ದೊಡ್ಡ ಮುತ್ತೈದೆ ಇಲ್ಲ. ನೀನು ಖಂಡಿತವಾಗಿಯೂ ಗೊಲ್ಲಹಳ್ಳಿಗೆ
ಹೋಗಕೂಡದು" ಎಂದು ಆತನ ತಾಯಿ ಹಠ ಹಿಡಿದಳು.

"ತೊಂದರೆಯೆಂದರೆ–ನಾನು ಸದಾ ದುಃಖದಿಂದಿರುತೇನೆ. ತಡೆಯಲು
ನನಗೆ ದೇವರು ಶಕ್ತಿ ಕೊಟ್ಟಿಲ್ಲ. ಸಂತೋಷದಿಂದಿರುವ ಸಂಸಾರಕ್ಕೆ
ನಾನೇಕೆ ಮುಳ್ಳಾಗಬೇಕು? ನಿಮಗೇಕೆ ನನ್ನ ದುಃಖ. ಆದುದರಿಂದ
ನಾನು ಬೇರೆ ಇರುವುದು ಒಳ್ಳೆಯದು. ನೀವು ದಯವಿಟ್ಟು ನನಗೆ ಅವ
ಕಾಶ ಕೊಡಬೇಕು. ಯಾವಾಗ ಕಾಗದ ಬರೆದರೂ ನಾನು ಬರುತೇನೆ.
ಗೊಲ್ಲಹಳ್ಳಿಯಲ್ಲಿಯೇ ಇರುತೇನೆ. ನೀವು, ನಾನಲ್ಲಿಗೆ ಹೋಗಲು ಅವಕಾಶ
ಕೊಡಬೇಕು" ಎಂದು ಅಂಗಲಾಚಿ ಬೇಡಿಕೊಂಡಳು.

ಗೊಲ್ಲಹಳ್ಳಿಗೆ ಹೊರಡುವುದು ತೀರ್ಮಾನವಾಯಿತು. ಅಂದು
ಸೀತಾರಾಮು ರುಚಿ ರುಚಿ ಅಡುಗೆ ಮಾಡಿಸಿದ್ದ. ಮಧ್ಯಾಹ್ನ ಹನ್ನೊಂದು
ಗಂಟೆಯೊಳಗಾಗಿ ಊಟವಾಯಿತು. ಸಂಜೆ ಬಿಸಿಲಿಳಿಯುವ ಹೊತ್ತಿಗೆ
ಗಾಡಿ ಸಿದ್ಧವಾಯಿತು. ಮೊದಲೇ ಗೊಲ್ಲಹಳ್ಳಿಗೆ ಹೇಳಿಕಳಿಸಿ, ಅಚ್ಚು

ಕಟ್ಟಾದ ಮನೆಯೊಂದನ್ನು ವಾಸಕ್ಕೆ ಸಿದ್ಧಪಡಿಸಿತ್ತು. ಗಾಡಿಯ ತುಂಬ ಒಂದು ತಿಂಗಳ ಜೀವನಕ್ಕಾಗುವಷ್ಟು ಸಾಮಾನು, ಉಡುಗೊರೆ, ಮಕ್ಕಳಿಗೆ ಬಟ್ಟೆಬರೆ, ಕೈಯೊಳಗೊಂದೊಂದು ರೂಪಾಯಿ, ಬುಟ್ಟಿ ತುಂಬ ತಿಂಡಿ-ಎಲ್ಲ ಕೊಟ್ಟು, ಆನಂದದಿಂದ ಅಳಿಯ ಮಗಳು ಬೀಳ್ಕೊಟ್ಟರು. ಮುದುಕಿಗೆ ನಮಸ್ಕಾರ ಮಾಡಿದಾಗ "ಕಷ್ಟ ಹರಿಯಲಮ್ಮ, ಸುಖವಾಗಿ ಬಾಳು. ದೇವರು ನಿನ್ನ ಗಂಡನಿಗೆ ಒಳ್ಳೆಯ ಬುದ್ಧಿ ಕೊಡಲಿ" ಎಂದು ಹರಸಿದಳು. ತಾಯಿ ಮಕ್ಕಳು ಗಾಡಿಯಲ್ಲಿ ಕುಳಿತರು. ಜೊತೆಗೆ ಬೀಗರ ಮನೆಯ ರೈತ ಹೊರಟ. ಈ ಸಂಭ್ರಮದಲ್ಲಿ ಮಗ ರಾಜು ಇಲ್ಲವಲ್ಲ; ಅವನು ಅಲ್ಲಿ ಎಷ್ಟು ಕಷ್ಟಪಡುತ್ತಿದ್ದಾನೊ! ಖಾಯಿಲೆ ಹೇಗಿದೆಯೊ, ಎಂದುಕೊಂಡು ನಿಟ್ಟುಸಿರುಬಿಟ್ಟಳು. ಮಗಳಿಗೆ ದುಃಖ ಬಂದಿತ್ತು. ಮಗಳು, ಅಳಿಯ ಗಾಡಿಗೆ ಹೊಂದಿಕೊಂಡು ಬಹಳ ಹೊತ್ತು ನಿಂತಿದ್ದರು. ಮಗಳ ಕಣ್ಣುಗಳು ನೀರಿನಿಂದ ತುಂಬುತ್ತಿದ್ದುವು. ಆದರೆ ಹುಡುಗಿ, ತಾಯಿಯನ್ನು ಆನಂದದಿಂದ ಕಳುಹಲು ದುಃಖವನ್ನು ಮರೆಮಾಚುತ್ತಿದ್ದಳು; ಮುಗುಳ್ನಗೆ ನಗಲು ಪ್ರಯತ್ನಪಡುತ್ತಿದ್ದಳು. ತಾಯಿ ತನ್ನೊಡನಿದ್ದರೇ ಆಕೆಗೆ ಸುಖವೆನಿಸಿತ್ತು. ಆದರೆ ಗಾಡಿ ಹೊರಟಿತು. ಮಗಳು ಅಳಿಯ ಅಲ್ಲಿಯೇ ನಿಂತಿದ್ದರು. ಅವರ ಹತ್ತಿರದಲ್ಲಿಯೇ ಮುದುಕಿ ನಿಂತಿದ್ದಳು. ಮಗಳ ಕೈ ತಡೆಯಲಾರದೆ ಸೆರಗಿನಿಂದ ಕಣ್ಣುಗಳನ್ನೊರಸಿತು. ಗಾಡಿ ಅವರಿಗಿದ್ದ ದೂರವನ್ನು ಹೆಚ್ಚಿಸಿತು; ಬಹಳ ದೂರ ಹೋಯಿತು; ಮನೆಯಿಂದ ಮರೆಯಾಯಿತು.

೧೦

ಗೊಲ್ಲಹಳ್ಳಿ ಸೇರಿ ಆರು ತಿಂಗಳಾಯಿತು. ಅಳಿಯ ಆಮೇಲೆ, ವರುಷಕ್ಕಾಗುವಷ್ಟು ಸಾಮಾನು ಕಳುಹಿಸಿದ್ದುದರಿಂದ ಜೀವನಕ್ಕೆ ಸ್ವಲ್ಪವೂ ತೊಂದರೆಯಾಗಿರಲಿಲ್ಲ. ಸುಖವಾಗಿ ಕಾಲ ಕಳೆಯುತ್ತಿದ್ದರು. ಜನರೂ ಬೇಕಾದವರಾದರು. ಸೀತಮ್ಮ, ಸಾಹುಕಾರ ಸೀತಾರಾಮುವಿನ ಅತ್ತೆ; ಆದುದರಿಂದ ಊರಿನ ಜನರಿಗೆಲ್ಲ ಆಕೆಯಲ್ಲಿ ಆದರ. ಆದರೆ ಅವಳಲ್ಲೇನೂ ಬದಲಾವಣೆಯಾಗಲಿಲ್ಲ.

ಇದ್ದ ಮನೆ ಅಚ್ಚುಕಟ್ಟಾಗಿತ್ತು. ಹೊಟ್ಟೆಗೆ ಕೊರತೆಯಿರಲಿಲ್ಲ. ಮಗಳ ಭಾರ ತಪ್ಪಿತು. ಆದರೆ ಗಂಡ ಬಿಟ್ಟ ಚಿಂತೆ, ಕೈಗೆ ಬಂದ ಮಗನ ಕಾಣದ ದುಃಖ, ಆಗಾಗ ಪೀಡಿಸುತ್ತಿತ್ತು. ತವರೂರಿನ ನೆನಪೂ ಬಂದು ಬಿಡುತ್ತಿತ್ತು. ಬಲು ದುಃಖವಾಗುತ್ತಿತ್ತು.

ಶಾರದೆಗೆ ಒಂಬತ್ತು ತುಂಬಿ ಹತ್ತರಲ್ಲಿ ಬಿದ್ದಿತ್ತು. ಮಗುವಿಗೆ ವರುಷದ ಮೇಲೆ ಒಂದು ತಿಂಗಳು ತುಂಬಿತ್ತು. ಶಾರದ ಎಲ್ಲ ಕೆಲಸಗಳನ್ನೂ ಮಾಡುತ್ತಿದ್ದಳು. ಮಕ್ಕಳು ಸುಖವಾಗಿ ಬೆಳೆದು, ಮೈ ಕೈ ತುಂಬಿಕೊಂಡುವು. ಅಮ್ಮ ಗಟ್ಟಿಯಾಗಿ ಅಳುವುದಕ್ಕೆ ಮೊದಲುಮಾಡಿದಾಗ ಮಾತ್ರ ತಾವೂ ಗಟ್ಟಿಯಾಗಿ ಅಳುತ್ತಿದ್ದುವು ; ಬೀದಿಗೆ ಕೇಳಿಸಿಬಿಡುತ್ತಿತ್ತು. ಆದುದರಿಂದ ಸೀತಮ್ಮ ರಾತ್ರಿ ಮಕ್ಕಳು ಮಲಗುವವರೆಗೂ ಕಷ್ಟದಿಂದ ದುಃಖ ತಡೆಯುತ್ತಿದ್ದಳು. ರಾತ್ರಿಯೆಲ್ಲ ನಿದ್ದೆಯೇ ಬರುತ್ತಿರಲಿಲ್ಲ. ಜೀವನಕ್ಕೆ ತೊಂದರೆಯಿಲ್ಲದಿದ್ದರೂ ದುಃಖದಿಂದಲೇ ಒಣಗಿ ಬಡವಾದಳು. ಚಿತೆ ಜೀವವಿಲ್ಲದ ದೇಹವನ್ನು ಸುಟ್ಟರೆ, ಚಿಂತೆ ಜೀವವಿರುವ ದೇಹವನ್ನೇ ಸುಡುತ್ತದೆಯಂತೆ.

ಊರು ಚಿಕ್ಕದಾದರೂ ನೋಡುವುದಕ್ಕೆ ಚೆನ್ನಾಗಿತ್ತು. ಮೂರು ನಾಲ್ಕು ಬೀದಿಗಳಿದ್ದುವು. ಜನರೆಲ್ಲರೂ ತಕ್ಕಮಟ್ಟಿಗೆ ಆಸ್ತಿವಂತರು ; ಗುಣವಂತರು. ಊರಿನ ಶಾಲೆ ಬಹಳ ಚೆನ್ನಾಗಿ ನಡೆಯುತ್ತಿತ್ತು. ಹೆಣ್ಣು ಮಕ್ಕಳಿಗೆ ವಿದ್ಯೆ ಸ್ವಲ್ಪವಾದರೂ ಆವಶ್ಯಕವೆಂಬ ತೀರ್ಮಾನಕ್ಕೆ ಬಂದಿದ್ದ ಸೀತಮ್ಮ ಆಗ ಶಾರದೆಯನ್ನು ಶಾಲೆಗೆ ಸೇರಿಸಿದ್ದಳು ; ಶಾರದ ಆರು ತಿಂಗಳೊಳಗಾಗಿ ಚೆನ್ನಾಗಿ ಓದುವುದನ್ನೂ ಬರೆಯುವುದನ್ನೂ ಕಲಿತಿದ್ದಳು.

ಆ ಊರಿಗೆ ಹೊಸಬರು ಬಹಳ ಜನ ಆಗಾಗ ಬಂದು ಹೋಗುತ್ತಿದ್ದರು. ಊರಿನ ಅಮ್ಮನ ಗುಡಿ ಬಹಳ ಪ್ರಸಿದ್ಧವಾದುದು. ಪ್ರತಿವರುಷವೂ ಜಾತ್ರೆ ನಡೆಯುತ್ತದೆ. ಆಗ ಕುರಿ ಕೋಣ ಬಲಿ ಕೊಡದಹೊರತು ಅಮ್ಮನಿಗೆ ಸಮಾಧಾನವಾಗುವುದಿಲ್ಲವಂತೆ. ಊರಿನ ಮುಖ್ಯಸ್ಥರೆಲ್ಲ ಜಾತ್ರೆಯಲ್ಲಿ ಭಾಗವಹಿಸುತ್ತಿದ್ದರು. ಜನರೆಲ್ಲಾ ಚಂದಾ ಹಾಕುತ್ತಿದ್ದರು.

ಜಾತ್ರೆಯ ದಿನ ಬಂತು. " ಕಳೆದ ವರುಷ ಮಹಾತ್ಮಾ ಗಾಂಧೀಜಿಯವರ ಪ್ರಚಾರ ಕೇಳಿ, ಎಲ್ಲರಿಗೂ ಬುದ್ಧನ ಗುಣ ಬಂದುಬಿಟ್ಟಿತ್ತು.

ಆದುದರಿಂದ ಮಾಮೂಲಿನ ಪದ್ಧತಿ—ಕೋಣ ಕುರಿ ಕಡಿಯುವುದನ್ನು ಬಿಟ್ಟು, ಗೋಧಿ ಪಾಯಸ ಮಾಡಿ ಹೊಡೆದರು. ಪಾಯಸದ ಹಿಂದೆಯೇ ಊರಿಗೆ ಕಾಲರಾ ಬಂದುಬಿಟ್ಟಿತು. ಜನರೆಲ್ಲ ಒದ್ದಾಡಿದ ಮೇಲೆ, ಆ ಅಮ್ಮನನ್ನು ಅಂಗಲಾಚಿ ಬೇಡಿ, ಊರ ಹೊರಗೆ ಕಳಿಸಿ ಬಂದದ್ದಾಯಿತು. ಈ ಬಾರಿ ಆ ಗೋಧಿ ಪಾಯಸವನ್ನತ್ತ ತಳ್ಳಿ, ತಲೆತಲಾಂತರದ ಪದ್ಧತಿಯನ್ನು ಮಾಡೋಣ" ಎಂದು ಗೌಡ ನರಸಣ್ಣ ಹೇಳಿದ. ಮುಖ್ಯಸ್ಥರೆಲ್ಲ ಅವನ ಸಲಹೆಗೆ ಒಪ್ಪಿದರು. ಉತ್ಸವ ಪದ್ಧತಿಯಂತೆಯೇ ನಡೆಯಿತು. ಊರಲ್ಲೆಲ್ಲ ಸಂಭ್ರಮ. ಜನರ ಸಾಲುಸಾಲೇ ಗುಡಿಗೆ ಹೋಗಿ ಬರುತ್ತಿತ್ತು. ಜಾತ್ರೆ ಮೂರು ದಿನ ನಡೆಯಿತು. ಸುತ್ತಮುತ್ತ ಹಳ್ಳಿಗಳಿಂದ ಸಾವಿರಾರು ಜನ ಬಂದಿದ್ದರು. ಅನೇಕ ಅಂಗಡಿಗಳು ಬಂದಿದ್ದುವು; ವ್ಯಾಪಾರ ಚೆನ್ನಾಗಿ ಆಗುತ್ತಿತ್ತು. ಊರಿನ ಜನರಿಗೆಲ್ಲ ಆನಂದ. ಎಲ್ಲರ ಮನೆಯಲ್ಲಿಯೂ ಸುಣ್ಣ ಕಾರಣೆ, ಹಸಿರು ತೋರಣ, ಸಾರಿಸಿಟ್ಟ ರಂಗವಲ್ಲಿ. ನೋಟ ಮನ ಸೆಳೆಯುತ್ತಿತ್ತು.

ಶಾರದೆಗೆ ಬಹಳ ಸಂತೋಷ. ದಿನವೆಲ್ಲ ಗುಡಿಯಲ್ಲಿಯೇ ಇರುತ್ತಿದ್ದಳು. ಊಟದ ಹೊತ್ತಿಗೆ ಮಾತ್ರ ಮನೆ. ಅವಳು ಹಠ ಹಿಡಿದುದರಿಂದ, ಸುದಿನವಾದುದರಿಂದ ತಾಯಿ ಒಂದು ಚಿತ್ರಾನ್ನ ಪಾಯಸ ಮಾಡಿ ಮಗುವಿಗೆ ತಿನ್ನಿಸಿದಳು. ಅನ್ನಪ್ರಾಸನದ ಶಾಸ್ತ್ರವಾಯಿತು

ಗುಡಿಗೆ ಹೋಗಿ ಬರಬೇಕೆಂದರೆ ಎಲ್ಲರಿಗೂ ಆಸೆ. ತೇರಿನ ಉತ್ಸವ, ಪ್ರಾಕಾರೋತ್ಸವ, ಗುಡಿಗೋಪುರದ ಅಲಂಕಾರ, ದೇವರ ಪೂಜೆಪುರಸ್ಕಾರ ನೋಡಲು ಹಳ್ಳಿಹಳ್ಳಿಗಳಿಂದ ಬೇಕಾದಷ್ಟು ಜನ ಬಂದಿದ್ದರು. ಆದರೆ ಸೀತಮ್ಮ ಮನೆ ಬಿಟ್ಟು ಹೊರಗೆ ಹೊರಡಲಿಲ್ಲ. ಶಾರದೆ ಬಲು ಪೀಡಿಸಿದಳು. "ದೇವರ ದರ್ಶನ ನೋಡಿಕೊಂಡು ಬರಲು ಹೀಗೇಕೆ ಮಾಡುವೆ?" ಎಂದು ಪದೇಪದೇ ಕೇಳಿದಳು. "ಹೋಗಿ ಬರೋಣ, ಬಾರಮ್ಮ. ಉತ್ಸವ ಬಹಳ ಚೆನ್ನಾಗಿದೆ. ಜನ ಕಿಕ್ಕಿರಿದು ಬರುತ್ತಾರೆ. ಎರಡು ಸಾಲು ಅಂಗಡಿಗಳನ್ನು ನೋಡಲು ಈ ಕಣ್ಣು ಸಾಲದು. ರಬ್ಬರ್‌ಬಳೆ ಬಂದಿದೆ, ಹಿತ್ತಾಳೆಬಳೆ ಬಂದಿದೆ, ಬೆಳ್ಳಿಬಳೆ ಬಂದಿದೆ, ಕಿವಿಗಿಟ್ಟುಕೊಳ್ಳುವ ಅನೇಕ ತರಹ ಲೋಲಕ್ಕುಗಳು ಬಂದಿವೆ. ದೂರದಿಂದ ಸಂಡಿಗೆ ಕಂಡಹಾಗೆ ಕಾಣುತದೆ, ಅಮ್ಮ!

ಅದೂ ಲೋಲಕ್ಕಂತೆ! ನೀನು ನೋಡಿಯೇ ಇಲ್ಲ. ಬಾ ಹೊರಡೋಣ” ಎಂದು ತುಂಬ ಬೇಡಿದಳು.

ಮಗಳ ಹಠ ತಡೆಯಲಾರದೆ ಸೀತಮ್ಮ ಅವಳೊಡನೆ ಗುಡಿಗೆ ಹೊರಟಳು. ಅಂದು ಮೂರನೆಯ ದಿನ. ಜನಸಂದಣಿ ಆಗಲೇ ಕಡಿಮೆಯಾಗಿ ಬಿಟ್ಟಿತ್ತು. ಸಂಜೆಗೆ ಜಾತ್ರೆ ಕದಲುತ್ತದೆ; ಮಧ್ಯಾಹ್ನ ನಾಲ್ಕು ಗಂಟೆಯಾಗಿತ್ತು. ಸೀತಮ್ಮ ಮಗಳೊಡನೆ ಗುಡಿಗೆ ಹೋಗಿ ಹಣ್ಣುಕಾಯಿ ಮಾಡಿಸಿಕೊಂಡು, ಎಲ್ಲ ನೋಡಿಕೊಂಡು ಮನೆಯ ಕಡೆ ವಾಪಸು ಹೊರಟಿದ್ದಳು. ಶಾನುಭೋಗರ ಮನೆಯ ಮುಂದೆ ಬಹಳ ಜನ ಸೇರಿದ್ದರು. ಶಾನುಭೋಗರ ಮಗಳು ಮನೆಯಿಂದ ಗುಡಿಯ ಕಡೆ ಹೊರಟಿದ್ದಳು. ಸೀತಮ್ಮ ಆಕೆಯನ್ನು ಚೆನ್ನಾಗಿ ಬಲ್ಲಳು. ಆಕೆಗೂ ಸೀತಮ್ಮನನ್ನು ಕಂಡರೆ ಬಲು ಪ್ರೀತಿ. ಆದುದರಿಂದ ನೋಡಿ, ಆಕೆ ನಿಂತಳು.

“ಸೀತಮ್ಮ, ನಮ್ಮ ಮನೆಗೊಬ್ಬರು ಬಂದಿದಾರೆ. ಬನ್ನಿ, ಕರೆದುಕೊಂಡು ಹೋಗುತೇನೆ. ನಾವೆಲ್ಲ ಅವರಿಗೆ ಕೈ ತೋರಿಸಿದೆವು. ಬಹಳ ಚೆನ್ನಾಗಿ ಭವಿಷ್ಯ ಹೇಳುತಾರೆ. ನೀವೂ ತೋರಿಸಿ, ಬನ್ನಿ” ಎಂದಳು.

ಸೀತಮ್ಮ “ನನಗೇನು ಭವಿಷ್ಯ ಇದೆಯೆಂದು ಕೈ ತೋರಿಸಲಿ ಪದ್ಮ? ನನಗೆ ಬೇಡಮ್ಮ, ಅದೆಲ್ಲ ಬರಿಯ ಭ್ರಾಂತಿ. ಅವರೊಂದು ಹೇಳಿದರೆ ನಡೆಯುವುದಿನ್ನೊಂದು. ಅದೊಂದು ಹುಚ್ಚು. ನನಗೆ ಬೇಡಮ್ಮ. ನಾನು ಮನೆಗೆ ಹೊರಟಿದೇನೆ” ಎಂದು ಮುಂದೆ ಹೊರಟಳು. ಪದ್ಮ ನಿಂತೇ ಇದ್ದಳು.

ಶಾರದ “ಹಾಗೆಂದರೇನಮ್ಮ? ಅವರು ಏನು ಹೇಳುತಾರೆ? ಮುಂದಾಗುವುದನ್ನೆಲ್ಲ ಹೇಳುತಾರ? ಅವರಿಗೆ ಹೇಗೆ ಗೊತ್ತಾಗುತದೆ?.... ಯಾರಿಂದ ತಿಳಿದುಕೊಂಡಿರುತಾರಮ್ಮ?” ಎಂದು ಕೇಳಿದಳು.

ಪದ್ಮ “ನೋಡಿ, ಶಾರದೆಗೆ ಎಷ್ಟು ಕುತೂಹಲ! ನಿನ್ನ ಕೈ ತೋರಿಸಿಬಿಟ್ಟರೆ, ಅವರು ನಿನ್ನ ಮುಂದಿನ ಕತೆಯನ್ನೆಲ್ಲ ಹೇಳಿಬಿಡುತಾರೆ, ನಾವೆಲ್ಲ ತೋರಿಸಿದೆವು. ನಿಮ್ಮ ತಾಯಿಯೂ ತೋರಿಸಲೆಂದು ನಾನು ಹೇಳಿದರೆ ಅವರೇಕೋ ಒಪ್ಪಲಿಲ್ಲ. ಬನ್ನಿ ಸೀತಮ್ಮ, ಸುಮ್ಮನೆ ಆದರೂ ಬನ್ನಿ. ನೀವು ಕೈ ತೋರಿಸದಿದ್ದರೂ ಚಿಂತೆಯಿಲ್ಲ” ಎಂದು ಬಲವಂತಪಡಿಸಿದಳು.

ಕೊನೆಗೆ ಸೀತಮ್ಮ ಯತ್ನವಿಲ್ಲದೆ ಅವರ ಮನೆಗೆ ಹೊರಡಬೇಕಾಯಿತು. ಇಷ್ಟು ಬೇಗ ಮನೆಗೆ ಹೋಗಿ ಮಾಡುವ ಕೆಲಸವೇನಿದೆ? ಏನೂ ಇಲ್ಲ. ಆದುದರಿಂದ ಶಾನುಭೋಗರ ಮನೆಯಲ್ಲಿಯೂ ಐದು ನಿಮಿಷ ಕುಳಿತು ಕೊಂಡು ಹೋದರಾಯಿತು. ತಾನು ಹೊರಗೆ ಬರುವುದೇ ಅಪರೂಪ, ಎಂದುಕೊಂಡು ಹೊರಟಳು.

ಅವರ ಮನೆಗೆ ಬಂದಿದ್ದವರು ಒಳ್ಳೆಯ ಪಂಡಿತರು. ಶಾನುಭೋಗರ ನಂಟರಂತೆ. ಮನೆಗೆ ಸುಮ್ಮನೆ ಬಂದಿದ್ದರು ಅವರಿಗೆ ಎಷ್ಟೋ ರಾಜ ಮಹಾರಾಜರುಗಳೂ ಕೈ ತೋರಿಸಿದ್ದಾರಂತೆ: ಬಹಳ ಪ್ರಸಿದ್ಧ. ಅವರು ಯಾರನ್ನೂ ದುಡ್ಡು ಕೇಳುತ್ತಿರಲಿಲ್ಲ. ಯಾರಾದರೂ ಬಲವಂತದಿಂದ ಕೊಟ್ಟರೆ ಮಾತ್ರ ತೆಗೆದುಕೊಳ್ಳುತ್ತಿದ್ದರು. ಅವರಿಗೆ ದೇವರೇನೂ ಕಡಮೆ ಮಾಡಿಲ್ಲವಂತೆ; ಆಸ್ತಿಪಾಸ್ತಿ ಚೆನ್ನಾಗಿದೆ, ಎಂದು ಶಾನುಭೋಗರ ಮಗಳು ಹೇಳಿದಳು.

ಆತ ನಡುಮನೆಯಲ್ಲಿ ಕೃಷ್ಣಾಜಿನ ಹಾಸಿಕೊಂಡು ಕುಳಿತಿದ್ದರು. ಜನ ಒಳಗೆ ಕಿಕ್ಕಿರಿದಿತ್ತು. ಒಬ್ಬರ ಮೇಲೊಬ್ಬರು ಆತುರದಿಂದ ಹಾತೊರೆದು ಕೈ ತೋರಿಸುತ್ತಿದ್ದರು. ಬೆಳ್ಳಿಯ ತಟ್ಟೆಯ ತುಂಬ ರೂಪಾಯಿಗಳು ಮಿಣಿ ಮಿಣಿ ಮಿಂಚುತ್ತಿದ್ದುವು. ಸೀತಮ್ಮ ಚಾಪೆಯ ಮೇಲೆ ಕುಳಿತು ಬಹಳ ಹೊತ್ತು ಈ ದೃಶ್ಯ ನೋಡುತ್ತಿದ್ದಳು.

ಶಾನುಭೋಗರ ಮಗಳು ಎಲ್ಲಿಗೋ ಹೋಗಿ ಹಿಂತಿರುಗಿ ಬಂದಳು. ಅಷ್ಟು ಹೊತ್ತಿಗಾಗಲೇ ಈ ಚಿತ್ರ ನೋಡಿದ ಸೀತಮ್ಮನಿಗೆ ತನ್ನ ಭವಿಷ್ಯ ತಿಳಿಯುವ ಕುತೂಹಲ, ಆಸೆ ಮೂಡಿತ್ತು. ಪದ್ಮ "ನೀವೂ ತೋರಿಸಿರಿ" ಎಂದು ಆಗಾಗ ಪೀಡಿಸುತ್ತಿದ್ದಳು. ದೀಪ ಹಚ್ಚುವ ಹೊತ್ತಾಯಿತು. ಜನರು ಕಡಮೆಯಾದರು. ಕೊನೆಗೆ ಎಲ್ಲರೂ ಹೊರಟುಹೋದರು. ಪದ್ಮ ಅವರಿಗೆ ಸೀತಮ್ಮನ ಪರಿಚಯ ಮಾಡಿಕೊಟ್ಟಳು. ಸೀತಮ್ಮ ಕೈ ತೋರಿಸಲು ಹಿಂದೆಗೆದಳು. ಆದರೆ ಆತ "ಈ ಹಣ ನೋಡಿ ಹೆದರಬೇಡಿ, ತಾಯಿ. ನಾನು ಸಂಪಾದಿಸಿದುದಲ್ಲ. ನನಗೆ ಹಣ ಬೇಡ. ಸುಮ್ಮನೆ ಬಲವಂತದಿಂದ ಕೆಲವರು ಇತ್ತ ಬಿಸುಟು ಹೋಗಿದಾರೆ ಬನ್ನಿ, ಕೈ ತೋರಿಸಿ, ನನಗೆ ತಿಳಿದ ಭವಿಷ್ಯ ಹೇಳುತೇನೆ" ಎಂದರು.

ಸೀತಮ್ಮ ಧೈರ್ಯ ಮಾಡಿದಳು. ಆತ ಬಹಳ ಹೊತ್ತು ಕೈ ನೋಡಿ ಸುಮ್ಮನೆ ಕುಳಿತುಬಿಟ್ಟರು. ಮಾತೇ ಆಡಲಿಲ್ಲ. ಸೀತಮ್ಮ ಅವರ ಮುಖವನ್ನೇ ನೋಡಿದಳು. ಆತನ ಮುಖದಲ್ಲಿ ಹರುಷವಿರಲಿಲ್ಲ. ಸ್ಥಿತಿ ಬದಲಾಯಿಸಿತ್ತು.

ಆಕೆಗೆ ಗುಟ್ಟು ತಿಳಿಯಿತು. "ಏಕೆ ಹಿಂಜರಿಯುತೀರಿ. ಹೇಳಿ, ಚಿಂತೆಯಿಲ್ಲ. ಇರುವ ವಿಷಯ ನನಗೆ ತಿಳಿಯಬಾರದೆ? ನನಗೇನೂ ದುಃಖವಿಲ್ಲ" ಎಂದು ಕೇಳಿಕೊಂಡಳು.

ಅವರು ಮತ್ತೊಮ್ಮೆ ಕೈಯನ್ನೆಲ್ಲ ಪರಿಶೀಲಿಸಿ "ಹೇಳಲೆ, ನಿಮ್ಮ ಹಿಂದಿನ ಕಷ್ಟ ಹೇಳತೀರದು. ನಿಮ್ಮ ಹಿರಿಯ ಮಗಳಿಂದ ಸ್ವಲ್ಪ ಸುಖ.......ಮೂಡಿತ್ತು....ಆದರೆ ಆ .......ದೆಸೆ.......ತೀರುತಾ ಬಂದಿದೆ. ನಿಮಗೆ ಪುನಃ ನಿಮ್ಮ ಮಗಳಿಂದಲೇ ತುಂಬ ಕಷ್ಟ ಬರಬಹುದು. ನಿಮ್ಮ ಮಕ್ಕಳ ದೇಹಸ್ಥಿತಿ ಕೆಡುತದೆ. ಆದರೆ ಶಾಂತಿ ಮಾಡಿಸುವುದರ ಮೂಲಕ ಈ ಎಲ್ಲ ಕಷ್ಟಗಳಿಂದಲೂ ಪಾರಾಗಬಹುದು" ಎಂದು ಸುಮ್ಮನಾದರು. ಸೀತಮ್ಮ ಕೈಯನ್ನು ಹಿಂದಕ್ಕೆ ತೆಗೆದುಕೊಂಡಳು. ತಲೆಯನ್ನೆತ್ತಲಿಲ್ಲ.

"ಹೋಗಿ ಬರುತೇನೆ ಪದ್ಮ, ಬಹಳ ಕತ್ತಲಾಯಿತು." ಎಂದು ಹೇಳುತ್ತ ಶಾರದೆಯೊಡನೆ ಮನೆಯ ಕಡೆ ಹೊರಟಳು.

ರಾತ್ರಿಯೆಲ್ಲ ಕಳವಳ, ನಿದ್ದೆಯೇ ಬರಲಿಲ್ಲ. ಭವಿಷ್ಯ ತಿಳಿದಮೇಲೆ ಚಿಂತೆ ಹೆಚ್ಚಿತು. ಬೆಳಗಿನ ಜಾವ ಇದ್ದಕ್ಕಿದ್ದಂತೆಯೇ ಶಾರದೆಗೆ ತುಂಬ ಜ್ವರ ಬಂದುಬಿಟ್ಟಿತು. ಮೂರು ದಿನದಿಂದ ಬಿಸಿಲಿನಲ್ಲಿ ಅಲೆದು ಹಸಿದ ಹೊಟ್ಟೆಗೆ ಪಾನಕ, ಕೋಸಂಬರಿ ಸುರಿದುಕೊಂಡುದರ ಫಲ; ಕಡಮೆಯಾದೀತು, ಎಂದುಕೊಂಡು ಸುಮ್ಮನಾದಳು

ಆದರೆ ಬೆಳಗಾದರೂ ಜ್ವರ ಬಿಡಲಿಲ್ಲ. ಮೈಮೇಲೆ ಕೈಯಿಡಲಾಗದು. ಬೆಂದುಹೋಗುತ್ತಿತ್ತು. ಸೀತಮ್ಮನಿಗೆ ಅನ್ನವೇ ಸೇರಲಿಲ್ಲ. ಸಂಜೆಯಾದರೂ ಮಗಳಿಗೆ ಜ್ವರ ಬಿಡಲಿಲ್ಲ. ಗಂಜಿಯೊಂದೇ ಆಕೆಗೆ ಆಹಾರ. ಏನೇನೋ ನಾಟಿ ಔಷಧ ಮಾಡಿದಳು. ಆದರೆ ಏನೂ ಪ್ರಯೋಜನವಾಗಲಿಲ್ಲ. ಜ್ವರ ಸ್ವಲ್ಪವೂ ಕಡಮೆಯಾಗಲಿಲ್ಲ. ಆ ರಾತ್ರಿ ಕಳೆಯುವುದು ಕಷ್ಟವಾಯಿತು. ಬೆಳಗ್ಗೆ ನೋಡುವಲ್ಲಿ ಶಾರದೆಯ ಮೈಮೇಲೆ ಕೆಂಪಗೆ

ಗುಳ್ಳೆಗಳು ಸುರಿದಿವೆ. ಸೀತಮ್ಮನಿಗೆ ಗಾಬರಿಯಾಯಿತು. ಸಂಜೆಯೊಳಗೆ ಬಹಳ ಜಾಸ್ತಿಯಾಗಿ ಸೂಜಿಯ ಮೊನೆಯಿಡಲು ಸಹ ಸ್ಥಳವಿಲ್ಲದಂತೆ ವ್ಯಾಪಿಸಿಬಿಟ್ಟಿತ್ತು. ಸೀತಮ್ಮ ದಿಕ್ಕೆಟ್ಟು ಗೋಳಾಡತೊಡಗಿದಳು. ದೊಡ್ಡಮ್ಮನೆಂದು ಊರೆಲ್ಲಾ ಹರಡಿಬಿಟ್ಟಿತು. ಅಕ್ಕಪಕ್ಕದ ಮನೆಯವರೆಲ್ಲ ಬಿಟ್ಟುಬಿಟ್ಟರು; ಒಬ್ಬಳೇ ಆದಳು. ಮಗುವೂ ತುಂಬ ಕಿರಿಕಿರಿ ಮಾಡತೊಡಗಿತು. ಅದನ್ನು ನೋಡಿಕೊಂಡು ಮಗಳ ಶುಶ್ರೂಷೆಯನ್ನು ಮಾಡುವ ಹೊತ್ತಿಗೆ ಸೀತಮ್ಮ ಹಣ್ಣುಹಣ್ಣಾಗಿಬಿಡುತ್ತಿದ್ದಳು.

ಮಗಳಿಗೆ ದೊಡ್ಡಮ್ಮ ಎದ್ದು ಮೂರು ದಿನಗಳಾದುವು. ಮುಖವೆಲ್ಲ ವಿಕಾರ; ಮೈಯೆಲ್ಲ ವಿಕಾರ. ಕೈಕಾಲು ಒಂದಕ್ಕೊಂದು ಅಂಟಿಕೊಂಡು ಹುಡುಗಿ ಬಹಳ ಕಷ್ಟಪಡುತ್ತಿತ್ತು. ಕಣ್ಣಿನೊಳಗೆಲ್ಲ ಎದ್ದುಬಿಟ್ಟಿತ್ತು. ತಲೆ ಕೂದಲ ನಡುವೆಯೆಲ್ಲ ತುಂಬಿಬಿಟ್ಟಿತ್ತು. ನೋಡಲಾರದ ರೂಪು. ತಕ್ಕಮಟ್ಟಿಗೆ ರೂಪವತಿಯಾದ ಹುಡುಗಿಗೇ ಈ ಗತಿಯಾಯಿತೆಂದು ತಾಯಿಗೆ ಬಲು ದುಃಖವಾಯಿತು.

ಮೂರನೆಯ ದಿನ ರಾತ್ರಿ ಮಗು ಬಹಳ ಅಳುತ್ತಿತ್ತು. ಸಮಾಧಾನಮಾಡಿ ಮಾಡಿ ಸೀತಮ್ಮನಿಗೆ ಸಾಕಾಯಿತು. ಖಾಯಿಲೆ ಮಗಳ ಶುಶ್ರೂಷೆ ದೊಡ್ಡದೆಂದು ಆ ಕೆಲಸದಲ್ಲಿ ನಿರತಳಾದಳು. ಮಗು ಅತ್ತು, ಅತ್ತು ತನ್ನಷ್ಟಕ್ಕೆ ತಾನೇ ಮಲಗಿ ನಿದ್ರೆ ಮಾಡತೊಡಗಿತು ಬೆಳಗಾದಾಗ ಸೀತಮ್ಮ ಎದ್ದು ಮಗುವನ್ನು ನೋಡಿದಳು. ಆಕೆಯ ಎದೆ ಒಡೆದಂತಾಯಿತು. ಅಲ್ಲೊಂದು ಇಲ್ಲೊಂದು ಕೆಂಪು ಗುಳ್ಳೆಗಳು ಕಾಣಿಸಿಕೊಂಡಿದ್ದುವು. ತುಂಬ ಅತ್ತುಬಿಟ್ಟಳು. ಅತ್ತೊಂದು ಹಾಸಿಗೆ ಇತ್ತೊಂದು ಹಾಸಿಗೆ ಹಾಕಿಕೊಂಡು ನಡುವೆ ಅನ್ನ ನಿದ್ದೆ ಇಲ್ಲದಂತೆ ಸುಮ್ಮನೆ ಕುಳಿತುಬಿಟ್ಟಳು.

ಎರಡು ದಿನ ಕಳೆಯಿತು. ಸೀತಮ್ಮನ ರೂಪವೇ ಬದಲಾಯಿಸಿತು. ಊರಿನವರಾರೂ ಮಾತಾಡಿಸಲು ಹತ್ತಿರ ಬರಲಿಲ್ಲ. ಈ ಕಷ್ಟದ ಸುದ್ದಿಯನ್ನು ಮಗಳೊಂದಿಗೆ ಮುಟ್ಟಿಸಲು ಮನಸ್ಸೇ ಬರಲಿಲ್ಲ. ತವರೂರಿಗಾಗಲಿ, ಮಾವನೂರಿಗಾಗಲೀ ಪತ್ರ ಹಾಕುವ ಇಷ್ಟಪಡಲಿಲ್ಲ.

ಸಂಜೆ ಐದು ಗಂಟೆಯ ಸಮಯ. ಮಕ್ಕಳ ವಿಕಾರ ಮುಖ ನೋಡಿ

ಬೇಸತ್ತು ಹೊರಜಗಲಿಯಮೇಲೆ ಸುಮ್ಮನೆ ಕುಳಿತಿದ್ದಳು. ವಾರಕೊಮ್ಮೆ ಬರುವ ಅಂಚೆಯವ ದೂರದಲ್ಲಿ ಬರುತ್ತಿದ್ದ. ಆಕೆಯ ದೃಷ್ಟಿ ಅವನ ಕಡೆ ಸುಳಿಯಲಿಲ್ಲ ಏಕೆಂದರೆ ಅವಳಿಗೆ ಪತ್ರ ಬರುವ ನಿರೀಕ್ಷಣೆ ಇರಲಿಲ್ಲ. ಆದರೆ ಆತ ಸೀತಮ್ಮನ ಮನೆಯ ಹತ್ತಿರವೇ ಬಂದ

ಮಗಳ ಊರಿಂದ ಪತ್ರ ಬಂದಿದೆಯೊ, ಏನೊ. ಮಗಳಿಗೆ ಏನು ವಿಪತ್ತು ಸಂಭವಿಸಿದೆಯೊ, ಎಂದು ಗಾಬರಿಯಿಂದ ಸೀತಮ್ಮ ಎದ್ದುನಿಂತು ಮುಂದೆ ಹೆಜ್ಜೆಯಿಟ್ಟಳು.

" ಸೀತಮ್ಮ, ಎಂದರೆ ತಾವೇ ತಾಯಿ ?" ಎಂದು ಆತ ಕೇಳಿದ.

" ಹೌದು " ಎಂದಳು.

" ಈ ಪತ್ರ ತೆಗೆದುಕೊಳ್ಳಿ " ಎಂದು ಕೊಟ್ಟು ಹೊರಟ. ಸೀತಮ್ಮ " ಅಯ್ಯಾ " ಎಂದು ಕರೆದಳು. ಆತ ಹಿಂತಿರುಗಿ ನೋಡಿದ. ಈ ಪತ್ರ ವನ್ನು ಸ್ವಲ್ಪ ಓದಿ ಹೇಳಪ್ಪ. ನನಗೆ ಓದು ಬರದು '' ಎಂದು ಕೇಳಿದಳು. ಆತ ಬೇಗ ಓದಿ ಕಾಗದವನ್ನು ಜಗಲಿಯಮೇಲಿಟ್ಟು ಹೊರಟುಹೋದ. ಸೀತಮ್ಮನ ತಲೆ ಕೆಟ್ಟುಹೋಯಿತು. ಕಾಗದ ತೆಗೆದುಕೊಂಡು ನಡು ಮನೆಗೆ ಬಂದಳು. ಬಿದ್ದು ಬಿದ್ದು ಅತ್ತಳು ; ಬಿಕ್ಕಿ ಬಿಕ್ಕಿ ಅತ್ತಳು. ದುಃಖ ಕಡಮೆಯಾಗಲಿಲ್ಲ.

" ನಿನ್ನ ಮುಖ ನೋಡಿ ವರುಷದ ಮೇಲಾಯಿತಲ್ಲಪ್ಪಾ. ಸಾಯು ವಾಗ ನನ್ನನ್ನೆಷ್ಟು ಬಾರಿ ಕೂಗಿ ಕೂಗಿ ಕರೆದೆಯೋ ! ಇನ್ನು ರಾಜಣ್ಣಾ, ಎಂದು ಯಾರನ್ನು ಕರೆಯಲಿ '' ಎಂದು ಗೋಳಾಡಿದಳು. ಹೆಚ್ಚು ಅತ್ತರೆ ಖಾಯಿಲೆ ಮಕ್ಕಳಿಲ್ಲಿ ಗಾಬರಿಪಡುವುವೊ, ಎಂದು ಆಗಾಗ ಸುಮ್ಮನಾಗು ತ್ತಿದ್ದಳು. ಆದರೆ ತಡೆಯಲಾಗುತ್ತಿರಲಿಲ್ಲ. ಮತ್ತೆ ಮತ್ತೆ ಅಳುತ್ತಿದ್ದಳು. ಜೀವನ ಬೇಡವೆನ್ನಿಸಿತು. ಕತ್ತಲಾಯಿತು.

* * * * *

ಬೆಳಕು ಹರಿದು ಒಂದೆರಡು ತಾಸುಗಳುರುಳಿದ್ದುವು. ಸೀತಮ್ಮನ ಮನೆಯ ಬೀದಿಯ ಬಾಗಿಲು ತೆರೆದಿತ್ತು ಮನೆಯಲ್ಲಿ ಸ್ವಲ್ಪವೂ ಸದ್ದಿರ ಲಿಲ್ಲ. ಮಕ್ಕಳು ನರಳುವುದು ಮೂರು ಮನೆಗೆ ಕೇಳಿಸುತ್ತಿತ್ತು ; ಆದರೆ ಸ್ವಲ್ಪವೂ ಶಬ್ದವಿಲ್ಲ, ಎಂದು ಎದುರು ಮನೆಯ ರಂಗರಾಯರು ಧೈರ್ಯ

ವಾಗಿ ಮನೆಯೊಳಗೆ ಹೋಗಿ ನೋಡಿದರು. ಮಕ್ಕಳ ಜೀವ ಹಾರಿ ಹೋಗಿತ್ತು. ಹೊರಗಿದ್ದ ಅವರ ತಮ್ಮನಿಗೆ ತಿಳಿಸಲು ಆತುರದಿಂದ ಬಂದರು. ಜನರ ಹಿಂಡುಹಿಂಡೇ ಊರ ಹೊರಗಿನ ಕೆರೆಯ ಕಡೆ ಹೊರಟಿತ್ತು. ತಮ್ಮ "ಕೆರೆಯೊಳಗೊಂದು ಶವ ತೇಲುತ್ತಿದೆಯಂತೆ" ಎಂದ